ಪ್ರಚಾರ ಪುಸ್ತಕ ಮಾಲೆ

228

# ಕೃಷಿ ಉತ್ಪಾದನೆಗೆ ಸಹಕಾರ ಸಂಸ್ಥೆಗಳ ನೆರವು

ಡಿ. ವೆಂಕಟರಾವ್



ಪ್ರಚಾರ ಪುಸ್ತಕ ಮಾಲೆ-೨೨೮

# ಕೃಷಿ ಉತ್ಪಾದನೆಗೆ ಸಹಕಾರ ಸಂಸ್ಥೆಗಳ ನೆರವು

ಡಿ. ವೆಂಕಟರಾವ್




೧೯೮೦

ಮೊದಲನೆಯ ಮುದ್ರಣ : ೧೯೮೦

5,000 ಪ್ರತಿಗಳು



ಬೆಲೆ : 25 ಪೈಸೆ

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ
ಮಾನಸಗಂಗೋತ್ರಿ, ಮೈಸೂರು–೫೭೦ ೦೦೬

ಮುದ್ರಕರು
ವಿಶ್ವವಿದ್ಯಾನಿಲಯದ ಮುದ್ರಣಾಲಯ
ಮೈಸೂರು

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ, ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳ ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ

ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು ಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪ ನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶ ವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗ ಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವ ವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋ ದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲಭಾವನೆ ಮೂಡು ವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತ ವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯ

ವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ–ಮುಂತಾದ ವಿಷಯಗಳನ್ನು ಕುರಿತ ಇನ್ನೂರ ಇಪ್ಪತ್ತೇಳು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಶ್ರೀ ಡಿ. ವೆಂಕಟರಾವ್ ಅವರ 'ಕೃಷಿ ಉತ್ಪಾದನೆಗೆ ಸಹಕಾರಿ ಸಂಸ್ಥೆಗಳ ನೆರವು' ಇದೀಗ ತಾನೆ ಈ ಮಾಲೆಯಲ್ಲಿ ಹೊರಬರುತ್ತಿದೆ ಇದು ಹೆಚ್ಚು ಜನಪ್ರಿಯವಾಗಲೆಂದು ಆಶಿಸುತ್ತೇನೆ.

**ಕೆ. ಎಸ್. ಹೆಗ್ಡೆ**
ಕುಲಪತಿ

ಮೈಸೂರು

# ಅರಿಕೆ

ಮೈಸೂರು ವಿಶ್ವವಿದ್ಯಾಲಯದ ಪ್ರಚಾರ ಪುಸ್ತಕ ಮಾಲೆಯ ಆಶ್ರಯದಲ್ಲಿ ಚಿತ್ರದುರ್ಗದಲ್ಲಿ ನವಂಬರ್ 20, 1974ರಂದು ಏರ್ಪಡಿಸಲಾಗಿದ್ದ ಉಪನ್ಯಾಸ ಶಿಬಿರದಲ್ಲಿ "ಕೃಷಿ ಉತ್ಪಾದನೆಗೆ ಸಹಕಾರಿ ಸಂಸ್ಥೆಗಳ ನೆರವು" ಎಂಬ ವಿಷಯದ ಬಗ್ಗೆ ಉಪನ್ಯಾಸ ಕೊಡುವ ಅವಕಾಶ ನನಗೆ ಲಭ್ಯವಾಯಿತು. ಅಂದು ನಾನು ನೀಡಿದ ಉಪನ್ಯಾಸದ ವಿವರಗಳು ಇಂದು ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟವಾಗುತ್ತಿದೆ. ಕಾರಣಾಂತರಗಳಿಂದ ಪ್ರಕಟಣೆ ತಡವಾಗಿದೆ. ಕೃಷಿ ದೇಶದ ಅರ್ಥವ್ಯವಸ್ಥೆಯ ಪ್ರಮುಖ ಅಂಗವಾದಂತೆ, ಸಹಕಾರ "ಗ್ರಾಮೀಣ ಭಾರತದ ಹಿರಿಯಾಶೆ" ಎನಿಸಿದೆ. ಸಹಕಾರ ಸಂಸ್ಥೆಗಳು ಕೃಷಿಯ ಅಧಿಕ ಉತ್ಪಾದನೆಯನ್ನು ಕುಗ್ಗಿಸಲು ಕಾರಣವಾಗಿರುವ ಶಕ್ತಿಗಳ ವಿರುದ್ಧ ಯಶಸ್ವಿಯಾಗಿ ಹೋರಾಡಬಲ್ಲವು. ಆದ್ದರಿಂದಲೇ ಸರಕಾರ ಸಹಕಾರವನ್ನು ಕೃಷಿ ಕ್ಷೇತ್ರದಲ್ಲಿ ಅಳವಡಿಸಿ ಆ ಮೂಲಕ ಕೃಷಿ ಅಭಿವೃದ್ಧಿಯನ್ನು ಹೊಂದಲು ಯತ್ನಿಸುತ್ತಿದೆ. ಪಂಚವಾರ್ಷಿಕ ಯೋಜನೆಗಳಲ್ಲಿ ವಿವಿಧ ರೀತಿಗಳಲ್ಲಿ ಸಹಕಾರಿ ವಿಕಾಸ ಕಾರ್ಯಕ್ರಮಕ್ಕೆ ಸರಕಾರದ ನೆರವು ದೊರೆಯುತ್ತಿದೆ.

ಪ್ರಸ್ತುತ ಕಿರುಹೊತ್ತಿಗೆಯಲ್ಲಿ ನಾನು ಭಾರತದಲ್ಲಿ ಸಹಕಾರ ರೂಪುಗೊಂಡ ಬಗೆ, ಬೆಳೆದ ಬಗೆ, ಕೃಷಿ ಉತ್ಪಾದನೆಯ ಹೆಚ್ಚಳಕ್ಕೆ ಅದು ಸಾಲ, ಮಾರಾಟ ಮುಂತಾದುವುಗಳ ಮೂಲಕ ನೆರವಾಗುತ್ತಿರುವ ಬಗೆ, ಇತ್ಯಾದಿ ವಿಷಯುಗಳನ್ನು ವಿವರಿಸಲು ಪ್ರಯತ್ನಿಸಿದ್ದೇನೆ. ಪುಸ್ತಕದ ಗಾತ್ರ ಕಡಿಮೆ ಇರಬೇಕೆಂಬ

ನಿರ್ಬಂಧ ಇರುವುದರಿಂದಾಗಿ ಸಮಗ್ರ ವಿವರಣೆ ಕೊಡುವುದು ಸಾಧ್ಯವಾಗಿಲ್ಲ. ಈ ಪುಸ್ತಕದಿಂದ ವಾಚಕರು ಕಿಂಚಿತ್ತಾದರೂ ಪ್ರಯೋಜನ ಪಡೆದರೆ ನನ್ನ ಶ್ರಮ ಸಾರ್ಥಕವಾದಂತೆ.

ಈ ಕಿರು ಹೊತ್ತಿಗೆಯ ಪ್ರಕಟಣೆಯಲ್ಲಿ ಆಸ್ಥೆ ವಹಿಸಿದ ವಿಶ್ವ ವಿದ್ಯಾಲಯದ ಪ್ರಕಟನ ವಿಭಾಗದ ನಿರ್ದೇಶಕರಾದ ಡಾ|| ಪ್ರಭುಶಂಕರ್‌ರವರಿಗೂ, ಸಂಪಾದನ ಸಹಾಕಯಕರಾದ ಶ್ರೀ ಡಿ. ಕೆ. ಈರೇಗೌಡರಿಗೂ ನನ್ನ ಧನ್ಯವಾದಗಳು. ಈ ಪುಸ್ತಕ ಬರೆಯಲು ನೆರವಾದ ನನ್ನ ಪತ್ನಿ ಶ್ರೀಮತಿ ಚಂದ್ರಪ್ರಭರಿಗೂ ಹಾಗೂ ಅಂದವಾಗಿ ಮುದ್ರಣ ಮಾಡಿದ ಮುದ್ರಣ ವಿಭಾಗದ ಸಿಬ್ಬಂದಿ ವರ್ಗದವರಿಗೂ ನನ್ನ ವಂದನೆಗಳು.

ಸರಕಾರಿ ಕಾಲೇಜು
ಹಾಸನ

**ಡಿ. ವೆಂಕಟರಾವ್**

# ಪರಿವಿಡಿ

# ಕೃಷಿ ಉತ್ಪಾದನೆಗೆ
# ಸಹಕಾರಿ ಸಂಸ್ಥೆಗಳ ನೆರವು

**ಪೀಠಿಕೆ**

ಭಾರತವು ಒಂದು ಅಭಿವೃದ್ಧಿಹೊಂದುತ್ತಿರುವ ರಾಷ್ಟ್ರವಾಗಿದ್ದು ಸುಮಾರು 5,67,338 ಹಳ್ಳಿಗಳನ್ನೊಳಗೊಂಡಿದೆ. ಶೇಕಡ 83 ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದು, ಕೃಷಿಯು ಇವರ ಜೀವನೋಪಾಯದ ಮುಖ್ಯ ವೃತ್ತಿಯಾಗಿದೆ. ಮನುಷ್ಯನೊಂದಿಗೆ ಕೃಷಿಯ ಸಂಬಂಧ ಇಂದು—ನಿನ್ನೆಯದಲ್ಲ. ಬಹಳ ಪುರಾತನ ಕಾಲದಿಂದಲೂ ಕೃಷಿಯು ಮನುಷ್ಯನ ನಾಗರೀಕತೆಯೊಂದಿಗೆ ಜೀವನಾಧಾರ ವೃತ್ತಿಯಾಗಿ ಬೆಳೆದುಬಂದಿದೆ. ಕೃಷಿಗೆ ಭಾರತದಲ್ಲಿ ಹಿಂದಿನಿಂದಲೂ ಮಹತ್ವದ ಸ್ಥಾನವನ್ನು ನೀಡಲಾಗಿದ್ದು ಕೃಷಿಯು ನಮ್ಮ ಮೂಲಭೂತ ಕೈಗಾರಿಕೆಯಾಗಿದೆ. ಪ್ರತಿಯೊಂದು ಕೈಗಾರಿಕೆ ಯಶಸ್ವಿಯಾಗಿ ನಡೆಯಬೇಕಾದರೂ ಕೃಷಿಯ ಪ್ರತ್ಯಕ್ಷ ಅಥವಾ ಪರೋಕ್ಷ ನೆರವು ಇರಲೇಬೇಕು. ರಾಷ್ಟ್ರದ ಅಭಿವೃದ್ಧಿ ರಂಗದಲ್ಲಿ ಇವೆರಡೂ ಬಹು ಮಹತ್ವದ ಪಾತ್ರವನ್ನು ವಹಿಸುತ್ತವೆ. ಇವೆರಡರ ತಳಹದಿಯ ಮೇಲೆ ರಾಷ್ಟ್ರದ ಭವಿಷ್ಯ ನಿಂತಿದೆ. ಇವೆರಡೂ ಒಂದು ರಥದ ಎರಡು ಚಕ್ರಗಳಿದ್ದಂತೆ ಎಂದು ಹೇಳಬಹುದು. ಯಾವ ರೀತಿ ಉತ್ತಮ ಕೃಷಿಯು ಉದ್ದಿಮೆಗಳ ಬೆಳವಣಿಗೆಗೆ ತಳಹದಿಯಾಗಿದೆಯೋ ಅದೇ ರೀತಿ ಉತ್ತಮವಾದ ಕೃಷಿಗೆ ಉದ್ದಿಮೆಗಳೂ ಸಹಕಾರಿಯಾಗಿವೆ. ಕೃಷಿಯಿಲ್ಲದೆ ಉದ್ದಿಮೆಗಳಿಲ್ಲ. ಉದ್ದಿಮೆಗಳಿಗೆ ಬೇಕಾಗುವ ಕಚ್ಚಾ ಪದಾರ್ಥಗಳನ್ನು ಕೃಷಿಯು ಒದಗಿಸಿ ಕೊಡ

ವಿದ್ದರೆ ಉದ್ದಿಮೆಗಳು ನಡೆಯಲಾರವು. ಒಂದು ರಾಷ್ಟ್ರವು ಪ್ರಗತಿ ಹೊಂದಬೇಕಾದರೆ ಕೇವಲ ಕೈಗಾರಿಕೆ ಅಥವಾ ಉದ್ದಿಮೆಗಳು ಬೆಳವಣಿಗೆ ಹೊಂದಿದರೆ ಸಾಲದು, ಅದೇ ವೇಗದಲ್ಲಿ ಕೃಷಿಯೂ ಅಭಿವೃದ್ಧಿ ಹೊಂದಬೇಕು. ಆದರೆ ದುರ್ದೈವದ ಸಂಗತಿ ಎಂದರೆ ಭಾರತದ ಬಹುಪಾಲು ಜನರು ಆಹಾರಕ್ಕೆ ಮೂಲವಾದ ಕೃಷಿಯನ್ನು ಅವಲಂಬಿಸಿದ್ದಾಗ್ಯೂ ಅವರ ಜೀವನ ಪಥದಲ್ಲಿ ಸುಧಾರಣೆಯನ್ನು ಹೊಂದದೆ 'ಬಡತನ'ವೆನ್ನುವ ವಿಷಚಕ್ರದಲ್ಲಿ ಸಿಲುಕಿ ಹೊರಬರುವ ಹಾದಿ ಕಾಣದೆ ತೊಳಲಾಡುತ್ತಿರುವುದು. ಇದಕ್ಕೆ ಕಾರಣಗಳು ಹಲವಾರು—ಅತಿವೃಷ್ಟಿ, ಅನಾವೃಷ್ಟಿ, ವೈಜ್ಞಾನಿಕ ಸಾಧನಗಳನ್ನು ಅಳವಡಿಸಿಕೊಂಡು ಬೇಸಾಯ ಮಾಡದಿರುವುದು, ಕಡಿಮೆ ಉತ್ಪನ್ನ, ರೈತರ ಅಜ್ಞಾನ, ಮೂಢ ನಂಬಿಕೆಗಳು ಇತ್ಯಾದಿ. ಮಾನವನ ಸುಖಸಂತೋಷಗಳಿಗೆ ಕೃಷಿಯು ಆಧಾರವಾಗಿದೆ ಎಂಬುದು ಇಲ್ಲಿ ಗಮನದಲ್ಲಿಡಬೇಕಾದ ಅಂಶ. ಇತರ ಉದ್ಯೋಗಗಳ ಬೆಳವಣಿಗೆಗೆ ಹಾಗೂ ದೇಶದ ಅಭಿವೃದ್ಧಿಗೆ ಕೃಷಿಯೇ ಜೀವಾಳವಾಗಿದೆ. ಇಂದು ಭಾರತದ ಕೃಷಿವಿಜ್ಞಾನದಲ್ಲಿ ಸಾಕಷ್ಟು ಪ್ರಗತಿಯು ಕಂಡುಬಂದಿದೆ. ಆದರೂ ಭಾರತದಲ್ಲಿ ಕೃಷಿಯು ಅಷ್ಟೊಂದು ಮುಂದುವರಿದಿಲ್ಲ. ಇದಕ್ಕೆ ಕಾರಣ ಕೃಷಿವ್ಯವಸ್ಥೆಯು ಅದಕ್ಷತೆ ಮತ್ತು ಕಡಿಮೆ ಉತ್ಪಾದನೆಗಳಿಂದ ಕೂಡಿರುವುದು. ಇದರಿಂದಾಗಿ ಆಹಾರ ಸಮಸ್ಯೆಯು ದಿನದಿನಕ್ಕೂ ಬೃಹದಾಕಾರವನ್ನು ತಾಳಿ ಜನತೆಯ ಜೀವನವನ್ನು ಹಿಂಡುತ್ತಿದೆ. ದಿನೇ ದಿನೇ ಬೆಳೆಯುತ್ತಿರುವ ಜನತೆಯ ಆಹಾರದ ಪೂರೈಕೆಗಾಗಿ ವಿದೇಶಗಳಿಂದ ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳುವ ಸ್ಥಿತಿ ನಮ್ಮ ದೇಶಕ್ಕೆ ಬಂದೊದಗಿದೆ. ಪರಿಸ್ಥಿತಿ ಹೀಗಿರುವಾಗ ಭಾರತವನ್ನು 'ಸ್ವತಂತ್ರ

ಭಾರತ'ವೆಂದು ಕರೆಯುವುದರಲ್ಲಿ ಯಾವ ಅರ್ಥವಿದೆ? ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಕೇವಲ ರಾಜಕೀಯ ಸ್ವಾತಂತ್ರ್ಯಗಳಿಸಿದರೆ ಅದು ತೋರಿಕೆಯ ಸ್ವಾತಂತ್ರ್ಯವಾಗುವುದು. ಆರ್ಥಿಕವಾಗಿ ಸ್ವಾತಂತ್ರ್ಯಗಳಿಸಬೇಕಾದರೆ ನಾವು ಸ್ವಾವಲಂಬಿಗಳಾಗಬೇಕು. ಇದಕ್ಕೆ ಮೊದಲನೆಯ ಹೆಜ್ಜೆಯಾಗಿ ಕೃಷಿಯು ಅಭಿವೃದ್ಧಿಯಾಗಬೇಕು. ಏಕೆಂದರೆ ಕೃಷಿಯ ಅಭಿವೃದ್ಧಿಯೇ ರಾಷ್ಟ್ರದ ಅಭಿವೃದ್ಧಿ. ಕೃಷಿಯು ರಾಷ್ಟ್ರದ ಬೆಳಕಿದ್ದಂತೆ. ರಾಷ್ಟ್ರದ ಸಮಸ್ಯೆಗಳ ಅಂಧಕಾರವನ್ನು ತೊಲಗಿಸಬೇಕಾದರೆ ಕೃಷಿಯ ಬೆಳಕಿನ ಕಿರಣಗಳು ಎಲ್ಲೆಡೆಯಲ್ಲೂ ನೂರ್ಮಡಿಯಾಗಿ ಹಬ್ಬಬೇಕು. ಈ ದಿಸೆಯಲ್ಲಿ 1950ರಲ್ಲಿ ಸರಕಾರವು 'ಯೋಜನೆ' ಎಂಬ ಮಹತ್ತರ ಚಳವಳಿಯನ್ನು ಪ್ರಾರಂಭಿಸಿ ಕೃಷಿಯ ಅಭಿವೃದ್ಧಿಗಾಗಿ ಪ್ರಾಶಸ್ತ್ಯ ಕೊಟ್ಟಿರುವುದು ನಿಜಕ್ಕೂ ಸ್ತುತ್ಯಾರ್ಹ. ಪ್ರಜಾಪ್ರಭುತ್ವದ ಹಿನ್ನೆಲೆಯಲ್ಲಿ ರಚಿತವಾಗಿರುವ ಈ ಯೋಜನೆಗಳಿಗೆ ಸಹಕಾರವು ಮೂಲಾಧಾರವಾಗಿದೆ. ಉತ್ತಮ ರೀತಿಯ ಕೃಷಿಯಿಂದ ಉತ್ಪನ್ನ ಹೆಚ್ಚಬೇಕಾದರೆ ಸಹಕಾರಕ್ಕಿಂತಲೂ ಮುಖ್ಯ ಸಾಧನ ಬೇರೊಂದಿಲ್ಲ. 'ಸಹಕಾರ' ಎಂದರೆ ಒಬ್ಬರಿಗೊಬ್ಬರು ಪರಸ್ಪರ ಸಹಾಯಕರಾಗಿ ಒಟ್ಟುಗೂಡಿ ಕೆಲಸಮಾಡುವುದು. ಕ್ರಿಮಿ ಕೀಟಗಳಿಂದಿಡಿದು ಮಾನವನವರೆಗೂ 'ಸಹಕಾರವು' ಬದುಕಿನ ಜೀವನಾಡಿಯಾಗಿದೆ. ಇಂದು ಸಹಕಾರವು ರಾಷ್ಟ್ರದ ಆರ್ಥಿಕ ಜೀವನ ಕ್ರಮವನ್ನು ರೂಪಿಸುವ ಒಂದು ಸಾಧನವಾಗಿದೆ. ಈ ಬಗೆಯ ಆರ್ಥಿಕ ಕ್ರಮವನ್ನು 'ಸಹಕಾರ ಪದ್ಧತಿ' ಎಂದು ಕರೆಯುವರು. ಈ ಪದ್ಧತಿಯಲ್ಲಿ ಬಡವ-ಬಲ್ಲಿದರು ಎಂಬ ಭೇದವಿಲ್ಲ. ಎಲ್ಲರೂ ಸಮಾನರು. 'ಒಗ್ಗಟ್ಟು' ಎನ್ನುವುದೇ ಈ ಪದ್ಧತಿಯ ತಾರಕ ಮಂತ್ರ. ಅಂದರೆ ಒಬ್ಬನಿಗಾಗಿ ಎಲ್ಲರೂ, ಎಲ್ಲರಿಗಾಗಿ ಪ್ರತಿ

ಯೊಬ್ಬನೂ (Each for all ; all for each) ಕಷ್ಟಪಟ್ಟು ದುಡಿಯಬೇಕೆನ್ನುವುದೇ ಇದರ ಉದ್ದೇಶ. ಇರುವ ಬಂಡವಾಳ ವನ್ನು ಎಲ್ಲರ ಹಿತಕ್ಕಾಗಿ, ನಿಸ್ವಾರ್ಥ ಮನೋಭಾವದಿಂದ ವಿನಿಯೋಗಿಸಬೇಕೆನ್ನುವುದೇ ಸಹಕಾರ ಪದ್ಧತಿಯ ಗುರಿ. ಈ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಮ್ಮ ದೇಶದಲ್ಲಿ ಹಲವಾರು ಸಂಘ, ಸಂಸ್ಥೆಗಳು ನಿರ್ಮಾಣವಾಗಿವೆ. ಕೃಷಿ ಉತ್ಪಾದನೆಯನ್ನು ಅಧಿಕಗೊಳಿಸಿ ಆಹಾರ ಧಾನ್ಯಗಳಲ್ಲಿ ಸ್ವಯಂ ಪೂರ್ಣತೆಯನ್ನು ಪಡೆಯುವ ಧ್ಯೇಯದಿಂದ ಇಂದು ಸಹಕಾರ ಸಂಸ್ಥೆಗಳು ಹೆಚ್ಚು ಹೆಚ್ಚಾಗಿ ಕೃಷಿ ಕ್ಷೇತ್ರವನ್ನು ಪ್ರವೇಶಿಸು ತ್ತಿವೆ. ನಮ್ಮ ರಾಷ್ಟ್ರದ ಭೀಕರ ಶತೃಗಳಾದ ಆಹಾರದ ಕೊರತೆ, ಬಡತನ, ಅತಿ ಜನಸಂಖ್ಯೆ ಮತ್ತು ನಿರುದ್ಯೋಗಗಳನ್ನು ಹೋಗ ಲಾಡಿಸಲು ಸಹಕಾರ ಒಂದು ಸಾರ್ವಭೌಮ ಔಷಧಿಯಾಗಿದೆ. ಸಹಕಾರ ಒಂದು ಮಗುವಿದ್ದಂತೆ, ಅದನ್ನು ಎಚ್ಚರಿಕೆಯಿಂದ ಸಾಕಿಸಲಹಿದರೆ ಮುಂದೆ ಅದು ದೊಡ್ಡದಾಗಿ ಬೆಳೆದು ನಮ್ಮನ್ನು ರಕ್ಷಿಸುತ್ತದೆ. ಸಹಕಾರದ ತಳಹದಿಯ ಮೇಲೆ ಕೃಷಿಕ್ಷೇತ್ರದಲ್ಲಿ ಹೆಜ್ಜೆ ಇಟ್ಟಿರುವ ಸಹಕಾರಿ ಸಂಸ್ಥೆಗಳು ದಕ್ಷತೆ, ಪ್ರಾಮಾಣಿಕತೆ, ನಿಸ್ಪೃಹತೆಗಳಿಂದ ಕಾರ್ಯಗಳನ್ನು ನಿರ್ವಹಿಸಿದರೆ ಕೃಷಿಯ ಉತ್ಪನ್ನ ಹೆಚ್ಚುವುದರಲ್ಲಿ ಯಾವ ಸಂಶಯವೂ ಇಲ್ಲ. ಈ ದೃಷ್ಟಿಯಿಂದ ಸಹಕಾರಿ ಸಂಸ್ಥೆಗಳು ಯಾವ ರೀತಿಯಲ್ಲಿ ನೆರವಾಗುತ್ತಿವೆ ಎಂಬುದನ್ನು ಸಂಕ್ಷಿಪ್ತವಾಗಿ ನಿರೂಪಿಸುವುದೇ ಈ ಕಿರುಹೊತ್ತಿಗೆಯ ಉದ್ದೇಶ.

## ಕೃಷಿಯ ಅದಕ್ಷತೆ

ಮನುಷ್ಯ ಮುಖ್ಯವಾಗಿ ಆರ್ಥಿಕ ಪ್ರಾಣಿ. ಅವನ ಮೊದಲ

ಸಮಸ್ಯೆಯೆಂದರೆ ಹೊಟ್ಟೆ, ಬಟ್ಟೆ ಮತ್ತು ವಸತಿ. ಹಿಂದಿನ ಕಾಲದಲ್ಲಿ ಮನುಷ್ಯನ ಬಯಕೆಗಳು ಈ ಮೂರಕ್ಕೆ ಮಾತ್ರ ಸೀಮಿತವಾಗಿದ್ದುದರಿಂದ ಆಗ ಆರ್ಥಿಕ ವ್ಯವಸ್ಥೆಯು ಅಗತ್ಯವೇ ಇರಲಿಲ್ಲ. ಹಿಂದೆ ಆಹಾರಕ್ಕಾಗಿ ಮನುಷ್ಯ ಒಂದೆಡೆಯಿಂದ ಇನ್ನೊಂದೆಡೆಗೆ ಅಲೆಯಬೇಕಾಗಿತ್ತು. ಆದರೆ ಬರಬರುತ್ತಾ ಕೃಷಿಯು ಮನುಷ್ಯನ ಒಂದು ಜೀವನ ಕ್ರಮವಾಗಿ ಮಾರ್ಪಟ್ಟು ಅವನ ಬದುಕಿನ ವಿಧಾನವನ್ನೇ ಬದಲಾಯಿಸಿ ಬಿಟ್ಟಿತು. ಇದ ರಿಂದಾಗಿ ಅವನು ಒಂದೆಡೆ ಸ್ಥಿರವಾಗಿ ನೆಲಸುವಂತಾಯಿತು. ನಾಗರೀಕತೆ ಮೊಳೆಯುವಂತೆ ಆದದ್ದು. ಕೃಷಿಯಿಂದಲೇ ಎಂದು ಹೇಳಬಹುದು. ಭಾರತದಲ್ಲಿ ಕೃಷಿಗಿರುವ ಮಹತ್ವ ಅಷ್ಟಿಷ್ಟಲ್ಲ. ಇಂದು ಕೃಷಿಯಿಂದಾಗಿ ಜನರ ಜೀವನ ಸಾಮಾಜಿಕವಾಗಿಯೂ, ಆರ್ಥಿಕವಾಗಿಯೂ ವಿಕಾಸಗೊಳ್ಳುತ್ತಿದೆ. ನಮ್ಮ ರಾಷ್ಟ್ರದ ಅರ್ಥ ವ್ಯವಸ್ಥೆಯಲ್ಲಿ ಕೃಷಿಗೆ ಮಹತ್ತರವಾದ ಸ್ಥಾನವನ್ನು ಕೊಟ್ಟಿದ್ದರೂ ಇದುವರೆಗೂ ಈ ಕ್ಷೇತ್ರದಲ್ಲಿ ತೃಪ್ತಿಕರವಾದ ಬೆಳವಣಿಗೆಯನ್ನು ಹೊಂದಿಲ್ಲ. ನಮ್ಮ ದೇಶದಲ್ಲಿ ಕೃಷಿಯೇ ಪ್ರಧಾನ ಉದ್ದಿಮೆ ಯಾಗಿದ್ದು ಶೇಕಡ 70 ಜನರು ಕೃಷಿಯನ್ನೇ ಮುಖ್ಯ ಕಸುಬನ್ನಾಗಿ ಅವಲಂಬಿಸಿದ್ದರೂ ಆಹಾರದ ಸಮಸ್ಯೆ, ಸಮಸ್ಯೆ ಯಾಗಿಯೇ ಉಳಿದಿದೆ. ಭಾರತ ಬಡದೇಶವಾಗಿಯೇ ಉಳಿದಿದೆ. ಭಾರತದಲ್ಲಿ ಕೃಷಿಯೇ ಪ್ರಧಾನ ಉದ್ದಿಮೆಯಾಗಿದ್ದರೂ ಇನ್ನೂ ಹಿಂದೆಯೇ ಉಳಿದಿದೆ ಎಂದರೆ ನಿಜಕ್ಕೂ ಹಾಸ್ಯಾಸ್ಪದ ವೆನಿಸುತ್ತದೆ. ಆದರೆ ಇದು ಸತ್ಯ. ನಮ್ಮ ದೇಶದಲ್ಲಿ ನಾವು ಪಡೆಯುವ ಹುಟ್ಟುವಳಿಯು ಪ್ರತಿ ಹೆಕ್ಟೇರಿಗೂ ಇತರ ಎಲ್ಲಾ ರೀತಿಯ ಉತ್ಪಾದನೆಗಿಂತಲೂ ಇಡೀ ಜಗತ್ತಿನಲ್ಲೇ ಕಡಿಮೆ ಇದೆ. ಅಲ್ಲದೆ ಪ್ರತಿ ಭಾರತೀಯ ಕೃಷಿಕಾರ್ಮಿಕನ

ವಾರ್ಷಿಕ ಸರಾಸರಿ ಆದಾಯವೂ ವಿಶ್ವದಲ್ಲೇ ಅತಿ ಕಡಿಮೆ ಎನಿಸಿದೆ. ಕೃಷಿಯು ಪ್ರತಿ ವರ್ಷವೂ ಶೇ. 52ರಷ್ಟು ಆದಾಯವನ್ನು ರಾಷ್ಟ್ರದ ಬೊಕ್ಕಸಕ್ಕೆ ತುಂಬುತ್ತಿದ್ದರೂ ನಾವಿನ್ನೂ ಸ್ವಾವಲಂಬಿಗಳಾಗಿಲ್ಲ. ನಾವು ಸ್ವಾವಲಂಬನೆಯನ್ನು ಹೊಂದಿ ನಮ್ಮ ನಾಡು ಪ್ರಗತಿಯ ಬೀಡಾಗಬೇಕಾದರೆ ಮೊದಲು ಕೃಷಿಯ ಅಭಿವೃದ್ಧಿಯಾಗಬೇಕು. ಕೃಷಿಯು ನಮ್ಮ ದೇಶದಲ್ಲಿ ಅದಕ್ಷತೆಯಿಂದ ಕೂಡಿರುವುದಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ—

1. **ಬಂಡವಾಳದ ಕೊರತೆ:** ಇಂದಿನ ಆಧುನಿಕ ಯುಗದಲ್ಲಿ ಬಂಡವಾಳವಿಲ್ಲದೆ ಯಾವ ಉದ್ದಿಮೆಯೂ ನಡೆಯುವಂತಿಲ್ಲ. ಮನುಷ್ಯನ ಜೀವನದಲ್ಲಿ ಹಾಗೂ ರಾಷ್ಟ್ರದ ಅರ್ಥವ್ಯವಸ್ಥೆಯಲ್ಲಿ ಬಂಡವಾಳದ ಮಹಿಮೆ, ಸಾಮರ್ಥ್ಯಗಳನ್ನು ಇಷ್ಟೆಂದು ವರ್ಣಿಸುವಂತಿಲ್ಲ. ಪ್ರತಿಯೊಂದು ಉದ್ದಿಮೆಗೂ ಬಂಡವಾಳವು ಮೂಲವಾಗಿದೆ. ಕೃಷಿಯೂ ಇದಕ್ಕೆ ಹೊರತಲ್ಲ. ನಮ್ಮ ದೇಶದಲ್ಲಿ ಕೃಷಿಯು ಹಿಂದುಳಿದಿರಲು ಮುಖ್ಯ ಕಾರಣ ಗ್ರಾಮೀಣ ಬಡತನ. ರೈತರು ಕಡುಬಡವರಾಗಿರುವುದರಿಂದ ಕೃಷಿಗೆ ಅಗತ್ಯವಾದ ರಸಾಯನಿಕ ಗೊಬ್ಬರಗಳು, ಉತ್ತಮ ಬೀಜಗಳು. ಆಧುನಿಕ ಉಪಕರಣಗಳನ್ನು ಕೊಳ್ಳಲು ಅವರಲ್ಲಿ ಸಾಕಷ್ಟು ಹಣದ ಕೊರತೆ ಇರುತ್ತದೆ. ಇದಕ್ಕಾಗಿ ಸಾಲ ಮಾಡುವುದು ಅನಿವಾರ್ಯವಾಗುತ್ತದೆ. ಅವರ ಸಾಲದ ಮೂಲ ಹಳ್ಳಿಯ ಸಾಹುಕಾರರು. ಇವರು ಹೆಚ್ಚು ಬಡ್ಡಿಗೆ ರೈತರಿಗೆ ಸಾಲ ಕೊಡುತ್ತಾರೆ. ರೈತರ ಗಳಿಕೆಯ ಹಣವೆಲ್ಲವೂ ಸಾಹುಕಾರರ ಬಡ್ಡಿಗೇ ವ್ಯಯಿಸಲಾಗುತ್ತದೆ. ಹೀಗೆ ರೈತರ ಶ್ರಮ ಸಾಹುಕಾರರ ಲಾಭವಾಗುತ್ತದೆ. ಇದರಿಂದ ರೈತರ ಬಡತನ ಮತ್ತಷ್ಟು ಹೆಚ್ಚಿ ಕೃಷಿಯ ಉತ್ಪನ್ನ ಮತ್ತಷ್ಟು ಕುಗ್ಗುತ್ತದೆ.

2. ನೈಸರ್ಗಿಕ ಕಾರಣಗಳು: ಕೃಷಿಯು ವರುಣದೇವರ ಕೈಗೊಂಬೆಯಾಗಿರುವುದರಿಂದ ಉತ್ತಮ ಬೆಳೆಯನ್ನು ಬೆಳೆಯಲು ರೈತರು ಮಳೆಯೊಡನೆ ಜೂಜಾಟ ನಡೆಸಬೇಕಾಗುತ್ತದೆ. ನಮ್ಮ ದೇಶದಲ್ಲಿ ಮಳೆಯು ಅನಿಶ್ಚಿತ ಮತ್ತು ಅನಿಯಮಿತವಾಗಿರುವುದರಿಂದ ಅತಿವೃಷ್ಟಿ ಹಾಗೂ ಅನಾವೃಷ್ಟಿಗಳ ಪ್ರಕೃತಿಯ ಪ್ರಕೋಪದ ಕ್ರೂರ ಹಿಡಿತದಲ್ಲಿ ಸಿಲುಕಿ ರೈತರು ಜರ್ಝರಿತರಾಗಬೇಕಾಗುತ್ತದೆ. ಕೈಗೆ ಬಂದ ತುತ್ತು ಬಾಯಿಗಿಲ್ಲದಂತಾಗಿ ಅವರ ದಾರಿದ್ರ್ಯದ ಮೋಡಗಳು ಚದುರದೆ ಮತ್ತಷ್ಟು ದಟ್ಟವಾಗುತ್ತಾ ಹೋಗುತ್ತದೆ. ನಿಸರ್ಗದ ಅದೃಷ್ಟದಾಟದೊಂದಿಗೆ ಅನೇಕವೇಳೆ ಬೆಳೆಗಳು ರೋಗಗಳಿಂದ, ಕ್ರಿಮಿಕೀಟಗಳಿಂದ ಹಾಳಾಗಬಹುದು. ಹೀಗೆ ಕೃಷಿಯು ನಿಸರ್ಗದ ಹಿಡಿತದಲ್ಲಿ ಸಿಕ್ಕಿರುವುದರಿಂದ ಉತ್ಪನ್ನ ಕಡಿಮೆಯಾಗಿದೆಯೆಂದು ಹೇಳಬಹುದು.

3. ಹಳೆಯ ಕೃಷಿ ಉಪಕರಣಗಳು: ನಮ್ಮ ದೇಶದಲ್ಲಿ ಆಧುನಿಕ ಉಪಕರಣಗಳಿಂದ ಕೃಷಿಯನ್ನು ಕೈಗೊಳ್ಳದಿರುವುದು ಕೃಷಿಯ ಕಡಿಮೆ ಉತ್ಪನ್ನಕ್ಕೆ ಒಂದು ಕಾರಣವಾಗಿದೆ. ಸಾವಿರಾರು ವರ್ಷಗಳ ಹಿಂದೆ ಉಪಯೋಗಿಸುತ್ತಿದ್ದ ಮರದ ನೇಗಿಲು, ರಾಟೆ, ಕುಂಟೆಗಳನ್ನು ಇತ್ಯಾದಿ; ಹಳೆಯ ಉಪಕರಣಗಳಿಂದ ಭೂಮಿಯನ್ನು ಆಳವಾಗಿ ಉಳುಮೆ ಮಾಡಲಾಗುವುದಿಲ್ಲ. ಇದರಿಂದ ಕೃಷಿಯ ಉತ್ಪನ್ನ ಅಧಿಕಗೊಳ್ಳಲು ಸಾಧ್ಯವಿಲ್ಲ.

4. ಸುಧಾರಿತ ಬೀಜ ಮತ್ತು ರಸಾಯನಿಕ ಗೊಬ್ಬರಗಳ ಅಭಾವ: ನಮ್ಮ ರೈತರು ಸಾಮಾನ್ಯವಾಗಿ ತಾವು ಬೆಳೆದ ಧಾನ್ಯದಲ್ಲೇ ಸ್ವಲ್ಪ ಭಾಗವನ್ನು ತೆಗೆದಿಟ್ಟು ಅದನ್ನು ಇನ್ನೊಂದು ಬೆಳೆಗೆ ಬೀಜವಾಗಿ ಉಪಯೋಗಿಸುತ್ತಾರೆ. ಹಣದ ಕೊರತೆ

ಯಿಂದಾಗಿ ಸುಧಾರಿತ ಬೀಜ ಮತ್ತು ರಸಾಯನಿಕ ಗೊಬ್ಬರಗಳನ್ನು ಬಳಸುವುದು ಅವರಿಂದಾಗುವುದಿಲ್ಲ. ಹೀಗೆ ಪ್ರತಿವರ್ಷವೂ ಗೊಬ್ಬರವಿಲ್ಲದೆ ಉಳುಮೆ ಮಾಡುವುದರಿಂದ ಕ್ರಮೇಣವಾಗಿ ಭೂಮಿಯ ಫಲವತ್ತತೆಯು ಕಡಿಮೆಯಾಗಿ ಉತ್ಪತ್ತಿ ಇಳಿಮುಖವಾಗುತ್ತದೆ.

5. ನೀರಾವರಿ ಸೌಲಭ್ಯಗಳ ಕೊರತೆ: ಭಾರತದಲ್ಲಿ ಶೇಕಡ 80ರಷ್ಟು ಭೂಮಿಯು ಮಳೆಯನ್ನು ಅವಲಂಬಿಸಿದ್ದು, ಶೇಕಡ 20ರಷ್ಟು ಭೂಮಿಗೆ ಮಾತ್ರ ನೀರಾವರಿಯ ಸೌಲಭ್ಯವಿದೆ. ಆದರೆ ಮಳೆಯು ಅನಿಶ್ಚಿತ ಮತ್ತು ಅನಿಯಮಿತವಿರುವುದರಿಂದ ಭೂಮಿಗೆ ನಿಶ್ಚಿತವಾದ ನೀರಾವರಿಯ ಸೌಕರ್ಯ ಬಹಳ ಅಗತ್ಯವಾಗಿದೆ. ಈ ಕೊರತೆ ನಮ್ಮ ದೇಶದಲ್ಲಿ ಬಹಳವಾಗಿರುವುದರಿಂದ ಕೃಷಿಯ ಉತ್ಪನ್ನ ಕಡಿಮೆಯಾಗಿದೆ.

6. **ಸಾರಿಗೆ ಸೌಲಭ್ಯಗಳ ಅಭಾವ**: ಸಾಮಾನ್ಯವಾಗಿ ಮಾರುಕಟ್ಟೆಗಳು ನಗರಗಳಲ್ಲಿ ಮತ್ತು ಪಟ್ಟಣಗಳಲ್ಲಿ ನಿರ್ಮಿತವಾಗಿರುತ್ತವೆ. ಈ ಸ್ಥಳಗಳಿಗೆ ಧಾನ್ಯಗಳನ್ನು ಕೊಂಡೊಯ್ಯಲು ಸರಿಯಾದ ಸಾರಿಗೆ ವ್ಯವಸ್ಥೆಯಿರುವುದಿಲ್ಲ. ಇದರಿಂದಾಗಿ ರೈತರು ಹಳ್ಳಿಯಲ್ಲೇ ಕಡಿಮೆ ಬೆಲೆಗೆ ತಮ್ಮ ಧಾನ್ಯಗಳನ್ನು ಮಾರಾಟ ಮಾಡಿ ಹಳ್ಳಿಯ ಸಾಹುಕಾರರ ಹಾಗೂ ದಲ್ಲಾಲಿಗಳ ಮೋಸಕ್ಕೆ ತುತ್ತಾಗುತ್ತಾರೆ. ಅವರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದಿರುವುದರಿಂದ ಹೆಚ್ಚು ಧಾನ್ಯಗಳನ್ನು ಬೆಳೆಯುವ ಉತ್ಸಾಹ ಅವರಲ್ಲಿ ಕಡಿಮೆಯಾಗುತ್ತದೆ.

7. ಜಮೀನ್ದಾರಿ ಪದ್ಧತಿ: ನಮ್ಮ ದೇಶದಲ್ಲಿ ಸ್ವಂತ ಹೊಲವನ್ನು ಹೊಂದಿರುವವರು ಬಹಳ ಕಡಿಮೆ ಸಂಖ್ಯೆಯಲ್ಲಿರುವುದರಿಂದ ಹೊಲವಿಲ್ಲದವರು ಜಮೀನ್ದಾರರಿಂದ ಭೂಮಿಯನ್ನು

ೕಣಿಗೆ ಪಡೆಯಬೇಕಾಗುತ್ತದೆ. ಇಲ್ಲಿ ಭೂಮಿಯ ಮಾಲಿಕ
ಮೀನ್ದಾರನೇ ಹೊರತು ರೈತನಲ್ಲ. ಈ ಭೂಮಿಯಲ್ಲಿ ರೈತರು
ಶ್ರಮವಹಿಸಿ ಉತ್ತು ಬಿತ್ತಿ ಬೆಳೆದ 2 ಭಾಗ ಜಮೀನ್ದಾರರಿಗೆ
ೕರಿದರೆ ರೈತರಿಗೆ 1 ಭಾಗ ಮಾತ್ರ ಸೇರುತ್ತದೆ. ಅಲ್ಲದೆ ಈ
ದ್ಧತಿಯಲ್ಲಿ ರೈತರಿಗೆ ಸಾಕಷ್ಟು ಭದ್ರತೆ ಇರುವುದಿಲ್ಲ. ತನ್ನದಲ್ಲದ
ಭೂಮಿಯಲ್ಲಿ ಆಸಕ್ತಿಯಿಂದ ದುಡಿಯಲು ರೈತರಿಗೆ ಉತ್ಸಾಹ
ಇರುವುದಿಲ್ಲ. ಇದರಿಂದ ಉತ್ಪತ್ತಿಯು ಕುಗ್ಗುತ್ತದೆ. ಆರ್ಥರ್
ಯಂಗ್ ಎಂಬುವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ–ಯಾವುದೇ
ಒಬ್ಬ ರೈತನಿಗೆ ಅವನ ಸ್ವಂತ ಆಸ್ತಿ ಎಂದು ಮರಳು ಭೂಮಿ
ಯನ್ನು ನೀಡಿದರೂ ಅವನು ಅದನ್ನು ಒಂದು ಸುಂದರವನ
ವನ್ನಾಗಿ ಪರಿವರ್ತಿಸುತ್ತಾನೆ. ಆದರೆ ಅದೇ ಸುಂದರವಾದ
ತೋಟವನ್ನು ಅವನಿಗೆ ಕೆಲಕಾಲದವುಟ್ಟಿಗೆ ಗೇಣಿ ಎಂದು
ಕೊಟ್ಟರೆ, ಆ ಅವಧಿಯು ಮುಗಿಯುವವೇಳೆಗೆ ಅದು ಮರಳು
ಕಾಡಾಗಿರುತ್ತದೆ. ಈ ಮಾತಿನಲ್ಲಿ ಸತ್ಯಾಂಶವಿದೆ.

8. ರೈತರ ಮೂಢನಂಬಿಕೆಗಳು: ನಮ್ಮ ರೈತರು ವಿದ್ಯಾ
ವಂತರಲ್ಲ. ಅವರಲ್ಲಿ ಅಂಧಶ್ರದ್ಧೆ ಬಹಳ ಹೆಚ್ಚಾಗಿದೆ. ಪ್ರಗತಿಪರ
ವಿಚಾರಗಳು ಅವರಿಗಿಲ್ಲದಿರುವುದರಿಂದಲೂ, ಧಾರ್ಮಿಕ ಪ್ರವೃ
ತ್ತಿಯು ಅವರ ಬದುಕಿನೊಂದಿಗೆ ಬೆರೆತುಹೋಗಿರುವುದರಿಂದಲೂ
ಮನುಷ್ಯನ ಮಲಮೂತ್ರಗಳನ್ನು, ಎಲುಬು ಮತ್ತು ಮೀನುಗಳ
ಗೊಬ್ಬರವನ್ನು ಭೂಮಿಗೆ ಹಾಕಲು ಅವರು ಹಿಂಜರಿಯುತ್ತಾರೆ.
ಅಲ್ಲದೆ, ಕೃಷಿಯನ್ನು ಅವರು ಒಂದು ಜೀವನವಿಧಾನವಾಗಿ
ನೋಡುತ್ತಾರೆಯೇ ಹೊರತು ಕೃಷಿಯು ತಮ್ಮ ಯಾಂತ್ರಿಕ
ಬದುಕನ್ನು ಆರ್ಥಿಕ ಬದುಕಿನ ಪಥಕ್ಕೆ ಕೊಂಡೊಯ್ಯುವ ಒಂದು
ಮಹತ್ತರವಾದ ಉದ್ದಿಮೆಯೆಂದು ಅವರು ತಿಳಿಯುವುದಿಲ್ಲ.

ರೈತರ ಈ ಮನೋಭಾವನೆಯಿಂದಾಗಿ ಕೃಷಿಯಲ್ಲಿ ಉತ್ಪತ್ತಿ ಕಡಿಮೆಯಾಗುತ್ತದೆ.

9. ರೈತರ ಋಣಭಾರ: "ಭಾರತದ ರೈತ ಸಾಲದಲ್ಲೇ ಹುಟ್ಟಿ, ಸಾಲದಲ್ಲೇ ಬೆಳೆದು, ಸಾಲದಲ್ಲೇ ಸಾಯುತ್ತಾನೆ" ಎಂದು 1920ರ ದಶಕದಲ್ಲಿ ರಾಯಲ್ ಕಮೀಷನ್ ತೀರ್ಮಾನಿಸಿತ್ತು. ಆದರೆ 20ನೇ ಶತಮಾನದ ಇಂದಿನ ಸ್ವತಂತ್ರ ನವ ಭಾರತದಲ್ಲೂ ಇದೇ ಪರಿಸ್ಥಿತಿಯು ಮುಂದುವರಿಯುತ್ತಿರುವುದು ನಿಜಕ್ಕೂ ಶೋಚನೀಯ. ಈ ರೀತಿಯ ಸಾಲಕ್ಕೆ ಮುಖ್ಯ ಕಾರಣ ಋಣದ ಭಾದೆಯು ರೈತರಿಗೆ ವಂಶಾನುಗತವಾಗಿ ಬಂದಿರುವುದು. ಫ್ರೆಂಚ್ ಭಾಷೆಯ ಗಾದೆಯಂತೆ ನೇಣು ಹಾಕಿಕೊಳ್ಳಲು ಹಗ್ಗವು ನೆರವಾಗುವಂತೆ ರೈತರಿಗೆ ಋಣಗ್ರಸ್ತರಾಗಲು ಸಾಲವು ನೆರವಾಗುವುದು, ಈರೀತಿ ಋಣಗ್ರಸ್ತರಾಗುವುದರಿಂದ ಆಧುನಿಕ ರೀತಿಯಲ್ಲಿ ಸಾಗುವಳಿ ಮಾಡಲು ರೈತರು ಅಸಮರ್ಥರಾಗಿ ಕೃಷಿಯ ಉತ್ಪನ್ನ ಕಡಿಮೆಯಾಗುತ್ತದೆ.

ಈ ರೀತಿ ಅನೇಕ ಕಾರಣಗಳು ಕೃಷಿಯ ಕಡಿಮೆ ಉತ್ಪನ್ನಕ್ಕೆ ಕಾರಣವಾಗಿವೆ. ಕಡಿಮೆ ಉತ್ಪನ್ನವು ಆಹಾರ ಸಮಸ್ಯೆಗೆ ಎಡೆ ಮಾಡಿಕೊಟ್ಟಿದೆ.

## ಆಹಾರ ಸಮಸ್ಯೆ

ನಮ್ಮ ನಾಡು ಸಮಸ್ಯೆಗಳ ಬೀಡು. ಇಂದು ನಮ್ಮ ದೇಶ ಎದುರಿಸುತ್ತಿರುವ ಹಲವಾರು ಭೀಕರ ಸಮಸ್ಯೆಗಳಲ್ಲಿ ಎಲ್ಲಕ್ಕಿಂತಲೂ ಜಟಿಲವಾದ ಹಾಗೂ ಪ್ರಮುಖವಾದ ಸಮಸ್ಯೆ ಎಂದರೆ ಆಹಾರ ಸಮಸ್ಯೆ. ಮಾನವನ ಬದುಕಿಗೆ ಗಾಳಿ, ನೀರು ಎಷ್ಟು ಅಗತ್ಯವೋ ಆಹಾರವೂ ಅಷ್ಟೇ ಅಗತ್ಯ. ಹಸಿವು

ಯಾರಿಗೂ ಏತಕ್ಕೂ ಕಾಯುವುದಿಲ್ಲ. ಬರಿಯ ಹೊಟ್ಟೆಯಿಂದ ಮನುಷ್ಯ ಏನನ್ನೂ ಸಾಧಿಸಲಾರ. ಹಸಿವಿನಿಂದ ಕಂಗೆಟ್ಟಿರುವ ಮನುಷ್ಯನಿಗೆ ಬದುಕೇ ಭಾರವಾಗಿ ತೋರುವುದರಲ್ಲಿ ಆಶ್ಚರ್ಯ ವಿಲ್ಲ. ಆಹಾರವಿಲ್ಲದೆ ಬಳಲುತ್ತಿರುವ ಮನುಷ್ಯನಿಗೆ ಸಮಾಜ ವಾದ ಹಾಗೂ ಪ್ರಜಾಪ್ರಭುತ್ವದ ಬಗ್ಗೆ ತಿಳಿಯಹೇಳಿದರೆ ಅವು ಅವನಿಗೆ ಶೂನ್ಯಪದಗಳಾಗಿ ತೋರುವುದು ಸಹಜ. ಮನುಷ್ಯನಲ್ಲಿ ತಾನು, ತನ್ನ ಕುಟುಂಬ, ತನ್ನ ಸಮಾಜ, ತನ್ನ ದೇಶ ಇವುಗಳ ಬಗ್ಗೆ ಆಸಕ್ತಿ, ಅಭಿಮಾನಗಳು ಮೂಡಬೇಕಾದರೆ, ರಾಷ್ಟ್ರವು ಆರ್ಥಿಕಾಭಿವೃದ್ಧಿಯನ್ನು ಸಾಧಿಸಬೇಕಾದರೆ ಮೊಟ್ಟಮೊದಲು ಮೂಲಭೂತವಾದ ಆಹಾರದ ಪೂರೈಕೆ ಸಾಕಷ್ಟು ಪ್ರಮಾಣದಲ್ಲಿ ಜನತೆಗೆ ದೊರೆಯಬೇಕು. ಆದರೆ ನಮ್ಮ ದೇಶ ನಾಲ್ಕು ಪಂಚ ವಾರ್ಷಿಕ ಯೋಜನೆಗಳ ನಂತರವೂ ವಿದೇಶಗಳಿಂದ ಆಹಾರ ಪದಾರ್ಥಗಳನ್ನು ಆಮದುಮಾಡಿಕೊಳ್ಳುತ್ತಿರುವುದು ಶೋಚ ನೀಯ. ಕೃಷಿ ಪ್ರಧಾನವಾದ ಭಾರತದಲ್ಲಿ ಆಹಾರ ಧಾನ್ಯಗಳಿ ಗಾಗಿ ವಿದೇಶಿ ನೆರವಿನ ಅಗತ್ಯ, ಬೇಡಿಕೆಗಳು ಯೋಜನೆಯಿಂದ ಯೋಜನೆಗೆ ಬದಲಾಗುತ್ತಿದೆಯೇ ಹೊರತು ಪರಿಹಾರವನ್ನು ಕಂಡುಕೊಳ್ಳುವುದು ಸಾಧ್ಯವಾಗಲಿಲ್ಲ. ಆಹಾರದ ಕೊರತೆ ಕಂಡುಬಂದಾಗಲೆಲ್ಲಾ ಧಾನ್ಯಗಳ ಆಮದಿನ ಮೂಲಕ ತಾತ್ಕಾ ಲಿಕ ಪರಿಹಾರವನ್ನು ಕಂಡುಕೊಂಡರೆ ಸಾಲದು. ಅದರ ಬದಲಿಗೆ ಉತ್ಪಾದನೆಯ ಹೆಚ್ಚಳಕ್ಕೆ ತಕ್ಕ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಒಳ್ಳೆಯದು. ವಿಪುಲವಾದ ಭೂಜಲ ಸೌಲಭ್ಯ ಗಳಿರುವ ನಮ್ಮ ದೇಶದಲ್ಲಿ ಆಹಾರದ ಸಮಸ್ಯೆಯನ್ನು ತಡೆಗಟ್ಟದೆ ಉಲ್ಬಣಗೊಳಿಸುವುದು ನಮ್ಮ ಸಂಸ್ಕೃತಿಗೆ ಅವಮಾನಕರ. ವಿದೇಶಿ ನೆರವು ಆರ್ಥಿಕ ಪ್ರಗತಿಗೆ ಪೂರಕವಾಗಿದ್ದು ಜೀವಂತ

ಪಾತ್ರವಹಿಸಿದರೂ ದೇಶದ ದೀರ್ಘಾವಧಿಯ ಬೆಳವಣಿಗೆಯ ದೃಷ್ಟಿಯಿಂದ ಆತಂಕಕಾರಿಯಾಗಬಹುದು. ಆದ್ದರಿಂದ ನಮ್ಮ ಕಾಲಮೇಲೆ ನಾವು ನಿಲ್ಲಬೇಕಾದುದು ದೇಶದ ಹಿತ, ಕಲ್ಯಾಣ ಗಳ ದೃಷ್ಟಿಯಿಂದ ಅಗತ್ಯ. ಇಂದು ನಮ್ಮನ್ನು ಕಾಡಿ ತಿನ್ನು ತ್ತಿರುವ ಅನೇಕ ಮಾರಕ ರೋಗಗಳು ಶೀಘ್ರವಾಗಿ ಗುಣ ಹೊಂದಬೇಕಾದರೆ ಮೊದಲು ಆಹಾರದಲ್ಲಿ ಸ್ವಾವಲಂಬನೆಯನ್ನು ಪಡೆಯಬೇಕು. ಆಹಾರ ಸಮಸ್ಯೆಯನ್ನು ಕೃಷಿಯ ಕಡಿಮೆ ಉತ್ಪನ್ನದ ಜೊತೆಗೆ ಅತಿ ಜನಸಂಖ್ಯೆ, ಸಕಾಲದಲ್ಲಿ ಬರದಿರುವ ಮಳೆ, ನೀರಾವರಿ ಸೌಲಭ್ಯಗಳ ಕೊರತೆ, ಆಧುನಿಕ ಕೃಷಿ ಪದ್ಧ ತಿಯ ಅಭಾವ, ಆಹಾರ ಧಾನ್ಯಗಳ ಅಪವ್ಯಯ ಇತ್ಯಾದಿ ಕಾರಣ ಗಳು ಮತ್ತಷ್ಟು ಜಟಿಲಗೊಳಿಸಿವೆ.

ಇಂದಿನ ಪರಿಸ್ಥಿತಿಯಲ್ಲಿ ಆಹಾರವು ಒಂದು ಮೂಲಭೂತ ಸಮಸ್ಯೆಯಾಗಿದೆ. ಈ ಸಮಸ್ಯೆಯನ್ನು ಶಾಶ್ವತವಾಗಿ ಬಗೆಹರಿ ಸಲು ಇರುವ ಏಕೈಕ ಮಾರ್ಗವೆಂದರೆ ಕೃಷಿ ಉತ್ಪಾದನೆಯನ್ನು ಅಧಿಕಗೊಳಿಸುವುದು. ಇದನ್ನು ತ್ವರಿತ ವೇಗದಲ್ಲಿ ಸಾಧಿಸ ಬೇಕಾದರೆ ಕೃಷಿಕರಿಗೆ ಅತ್ಯವಶ್ಯಕವಾದ ರಸಾಯನಿಕ ಗೊಬ್ಬರ ಗಳು, ಸುಧಾರಿತ ಬೀಜಗಳು, ಆಧುನಿಕ ಯಂತ್ರೋಪಕರಣ ಗಳು, ನೀರಾವರಿ ಸೌಲಭ್ಯಗಳು, ಮಾರುಕಟ್ಟೆಯ ಸೌಲಭ್ಯ ಗಳು, ಸಾರಿಗೆ ಮತ್ತು ಉಗ್ರಾಣ ವ್ಯವಸ್ಥೆಯ ಸೌಲಭ್ಯಗಳನ್ನು ಸಕಾಲದಲ್ಲಿ ಒದಗಿಸಬೇಕು. ಕೃಷಿಯ ಅಭಿವೃದ್ಧಿಗೆ ಸಹಕಾರ ತಳಹದಿಯಾಗಬೇಕು. ರೈತರು ಸಹಕಾರ ರೀತಿಯ ಪ್ರಯತ್ನ ದಲ್ಲಿ ನಿರತರಾಗಬೇಕು. ಕೃಷಿಯು ಕೇವಲ ರೂಢಿಬದ್ಧ ಪಾರು ಉದ್ದಿಮೆ ಅಲ್ಲವೆಂಬ ಭಾವನೆಯು ರೈತರಲ್ಲಿ ಮೂಡಬೇಕು. ಅವರ ಮನೋಮಂದಿರದಲ್ಲಿ ಬೇರುಬಿಟ್ಟಿರುವ ಮೂಢನಂಬಿಕೆ

ಜನ್ನು ಕಿತ್ತೊಗೆದು ಹೊಸ ಭಾವನೆಗಳು ಮೊಳೆಯುವಂತಾಗ
ಬೇಕು. ಅಜ್ಞರಾದ ರೈತರಿಗೆ ಜ್ಞಾನದ ಸಂಜೀವಿನಿಯನ್ನು ನೀಡ
ಬೇಕು. ಕೇವಲ ಜೀವನಕ್ರಮವಾಗಿರುವ ಕೃಷಿಯು ಆಧುನಿಕ
ಯಂತ್ರಗಳಿಂದೊಡಗೂಡಿದ ವಾಣಿಜ್ಯ ಉದ್ದಿಮೆಯಾಗಿ ಪರಿ
ವರ್ತನೆಯಾಗಬೇಕು. ಪ್ರಾಧ್ಯಾಪಕ ಆರ್ಥರ್ ಲೆವಿಸ್‌ರವರ
ಮಾತುಗಳಲ್ಲಿ ಹೇಳುವುದಾದರೆ—"ವ್ಯವಸಾಯದ ಸಮಸ್ಯೆ
ಗಳನ್ನು ಬಗೆಹರಿಸಬೇಕಾದರೆ ಜೀವನಾಧಾರ ಸಾಗುವಳಿಯನ್ನು
ಕ್ರಮೇಣವಾಗಿ ವಾಣಿಜ್ಯಸಾಗುವಳಿಯನ್ನಾಗಿ ಪರಿವರ್ತಿಸ
ಬೇಕು. ಇದರಿಂದಲೇ ಕೃಷಿಯು ಅಧಿಕ ಉತ್ಪನ್ನ ಹಾಗೂ
ದೇಶದ ಆರ್ಥಿಕ ಪ್ರಗತಿಯಾಗಲು ಸಾಧ್ಯ." ರೈತರು ಮಣ್ಣಿನ
ಮಕ್ಕಳು, ನೇಗಿಲಯೋಗಿಗಳು, ನಾಡಿನ ಬೆನ್ನೆಲಬುಗಳಾದ
ವನ್ನು ರೈತಭಾಂದವರಿಗೆ ಗೊಬ್ಬರಗಳನ್ನು, ಉತ್ಕೃಷ್ಟ ಬೀಜ
ಗಳನ್ನು ಹಾಗೂ ಇತರ ಸೌಲಭ್ಯಗಳನ್ನು ಒದಗಿಸಿ, ಅವರಿಗೆ
ನಾಡಿನ ಸಮಸ್ಯೆಗಳನ್ನು ಮನವರಿಕೆ ಮಾಡಿಕೊಟ್ಟರೆ ಅವರು
ಉತ್ಸಾಹದಿಂದ ದುಡಿದು ಉತ್ಪಾದನೆಯನ್ನು ಅಧಿಕಗೊಳಿಸು
ವುದರ ಮೂಲಕ ಹಸಿರುಕ್ರಾಂತಿಯನ್ನು ಹೊಂದಲು ದಿಟ್ಟಹೆಜ್ಜೆ
ಇಡುವುದರಲ್ಲಿ ಸಂಶಯವೇ ಇಲ್ಲ. ಈ ದಿಸೆಯಲ್ಲಿ ಆಹಾರ ಧಾನ್ಯ
ಗಳ ಬಗ್ಗೆ ಸ್ವಾವಲಂಬನೆಯನ್ನು ಹೊಂದಿ ನಾಡಿನ ಪೌರರಿಗೆ
ಸುಖ, ಸಂತೃಪ್ತಿಗಳ ಬದುಕನ್ನು ಕೊಡುವ ಉದ್ದೇಶದಿಂದ
ಸರಕಾರವು 1904ರಿಂದ 'ಸಹಕಾರ'ವನ್ನು ಅನುಷ್ಠಾನಕ್ಕೆ
ತಂದಿತು. ಸಹಕಾರವು ಇಂದು ಕೃಷಿ ಕ್ಷೇತ್ರವನ್ನು ಪ್ರವೇಶಿಸಿ
ಕೃಷಿಯ ಉತ್ಪನ್ನವನ್ನು ಅಧಿಕಗೊಳಿಸುವುದರ ಮೂಲಕ ಆಹಾರ
ಸಮಸ್ಯೆಯನ್ನು ನಿರ್ಮೂಲಮಾಡಲು ನೆರವಾಗುತ್ತದೆ. ರೈತರಿಗೆ
ಸಹಕಾರವು ಒಂದು ವರವಾಗಿ ಪರಿಣಮಿಸಿದೆ. ಸಹಕಾರದ

ಯಶಸ್ಸು ಕೃಷಿ ಉತ್ಪಾದನೆಗೆ ನಾಂದಿ ಎನ್ನಬಹುದು. ಈ ದೃಷ್ಟಿ ಯಿಂದ ಸಹಕಾರವು ದೇಶದ ಅನ್ನಾಭಾವವನ್ನು ನೀಗಿಸಲು ಕೃಷಿ ಕರಿಗೆ ಸಂಜೀವಿನಿಯಾಗಿದೆ. ದೀನದಲಿತರಿಗೆ ಬದುಕಿನಲ್ಲಿ ಆಸೆ ಯನ್ನು ತುಂಬುವ ಕೈದೀವಿಗೆಯಾಗಿದೆ.

## ಸಹಕಾರ ಎಂದರೇನು? ಸಹಕಾರವೇ ಜೀವನ— ಜೀವನವೇ ಸಹಕಾರ

ಗ್ರಾಮಾಂತರ ಪ್ರದೇಶಗಳಲ್ಲಿನ ಜನರ ಇತಿಮಿತಿ ಇಲ್ಲದ ಸಾಲದ ಹೊರೆಯನ್ನು ಇಳಿಸಲು ಸಹಕಾರ ವ್ಯವಸ್ಥೆಯು ನಮ್ಮ ದೇಶದಲ್ಲಿ ಆರಂಭವಾಯಿತು. ಇದರಿಂದಾಗಿ ಮಾನವನ ಸಹಜ 'ಸ್ವಹಿತವು' ಗುಂಪು ಹಿತವಾಗಿ ಮಾರ್ಪಟ್ಟಿತು.

ಸಾಮಾನ್ಯ ಅರ್ಥದಲ್ಲಿ 'ಸಹಕಾರ' ಎಂದರೆ ಒಟ್ಟುಗೂಡಿ ಕೆಲಸ ಮಾಡುವುದು ಅಥವಾ ಜೀವನ ನಡೆಸುವುದು ಎಂದರ್ಥ. ಪ್ರಾಣಿಗಳಲ್ಲೂ ಈ ಸ್ವಭಾವವನ್ನು ಕಾಣಬಹುದು. ಹಿಂದೂ ಅವಿಭಕ್ತ ಕುಟುಂಬವು ಇದಕ್ಕೆ ಒಂದು ಉತ್ತಮ ಆದರ್ಶವಾಗಿದೆ; ಹೇಗೆಂದರೆ ಇಲ್ಲಿ ಮನೆಯ ಯಜಮಾನ, ಯಜಮಾನಿ, ಅಣ್ಣ–ತಮ್ಮ ಅಕ್ಕ–ತಂಗಿ, ಅತ್ತಿಗೆ–ನಾದಿನಿ ಎಲ್ಲರೂ ಒಟ್ಟಿಗೆ ದುಡಿದು ಕುಟುಂಬವು ಆರ್ಥಿಕ ದೃಷ್ಟಿಯಿಂದ ವೃದ್ಧಿಯಾಗುವುದರಲ್ಲಿ ನೆರ ವಾಗುವರು. ಆದರೆ ಆರ್ಥಿಕ ರಚನೆಯಲ್ಲಿ 'ಸಹಕಾರ' ಎಂಬ ಪದಕ್ಕೆ ವಿಶಿಷ್ಟ ಅರ್ಥವಿದೆ. ಇಲ್ಲಿ 'ಸಹಕಾರ' ಎಂದರೆ ಒಂದು ವಿಶೇಷರೀತಿಯಾದ ಆರ್ಥಿಕ ಜೀವನ ಕ್ರಮ. ಇದನ್ನೇ 'ಸಹ ಕಾರ ಪದ್ಧತಿ' ಎಂದು ಕರೆಯುತ್ತಾರೆ. ಇಲ್ಲಿ ಸಹಕಾರವು ಆರ್ಥಿಕ ಪ್ರಜಾಪ್ರಭುತ್ವದ ಒಂದು ರೂಪವಾಗಿ ಪರಿಣಮಿಸಿದೆ. ಇದು ಒಂದು ಸ್ವಯಂಸಾಧಕ ಚಳುವಳಿ. ಈ ಚಳುವಳಿಯು

ನೆಯ ಶತಮಾನದ ಮಧ್ಯದಲ್ಲಿ ಆರ್ಥಿಕ ಪದ್ಧತಿಯು ರೂಪ ನ್ನು ತಾಳಿದ್ದು ಈ ಶತಮಾನದ ಆರಂಭದಲ್ಲಿ ಜನರ ಚಳುವಳಿ ಾಗಿ ರೂಪುಗೊಂಡಿದೆ. ಸ್ವಯಂಪ್ರೇರಣೆ ಹಾಗೂ ಸ್ವಯಂ ಡಳಿತವು ಸಹಕಾರಿ ಚಳುವಳಿಯ ಅಸ್ತಿತ್ವಕ್ಕೂ, ಬೆಳವಣಿಗೆಗೂ ೂಲಾಧಾರವೆಂದು ಹೇಳಬಹುದು. ರಾಬರ್ಟ್ ಓವೆನ್ ಹಕಾರದ ಮೂಲಪುರುಷ. ಆತ ಅಂದು ನೆಟ್ಟ ಸಹಕಾರದ ೀಜ ಇಂದು ಒಂದು ದೊಡ್ಡ ಹೆಮ್ಮರವಾಗಿ ಬೆಳೆದು ವಿವಿಧ ುಖಗಳಲ್ಲಿ ವಿಶಾಲವಾಗಿ ಹಬ್ಬುತ್ತಿದ್ದು ಕೋಟ್ಯಾಂತರ ಜನರಿಗೆ ೆರಳು ನೀಡುತ್ತಿದೆ. 'ಒಬ್ಬನಿಗಾಗಿ ಎಲ್ಲರೂ; ಎಲ್ಲರಿಗಾಗಿ ಪ್ರತಿ ೊಬ್ಬನೂ' ಎನ್ನುವ ತತ್ವದ ತಳಹದಿಯ ಮೇಲೆ ಸಹಕಾರ ೌಧವನ್ನು ನಿರ್ಮಿಸಲಾಗಿದೆ. ಆರ್ಥಿಕವಾಗಿ ಹಿಂದುಳಿದಿರುವ ಾಷ್ಟ್ರಗಳ ಸಮಸ್ಯೆಗಳಿಗೆ ಸಹಕಾರವು ಒಂದು ಸಂಜೀವಿನಿಯಾಗಿ ರಿಣಮಿಸಿದೆ. ಸಹಕಾರ ಒಬ್ಬ ವ್ಯಕ್ತಿಯಿಂದ ಆಗುವುದಿಲ್ಲ. ದೊಂದು ಹಲವಾರು ವ್ಯಕ್ತಿಗಳ ಬೀಡು. ಅಂದರೆ, ಸಹ ಕಾರದ ಯಾವುದೊಂದು ಚಟುವಟಿಕೆಯೂ ತನ್ನಷ್ಟಕ್ಕೆ ತಾನೇ ೆಳವಣಿಗೆಯನ್ನು ಹೊಂದಲಾರದು. ಅದು ಬೆಳವಣಿಗೆಯನ್ನು ೊಂದಬೇಕಾದರೆ ಸಹಕಾರಿ ಘಟಕದ ಜೊತೆಗೂಡಬೇಕು. ಸಹಕಾರ ಪದ್ಧತಿಯಲ್ಲಿ ಮನುಷ್ಯ ತನ್ನಮೇಲಿನ ಹೊರೆಯನ್ನು ಇಳಿಸಿಕೊಂಡು, ಪರರಮೇಲಿನ ಹೊರೆಯನ್ನೂ ಕಡಿಮೆ ಮಾಡ ಬಲ್ಲನು. ಪರರ ಸುಖವನ್ನು ಸಾಧಿಸಿ ತನ್ನ ಸುಖವನ್ನು ಸಾಧಿಸ ಬಲ್ಲ. ಮಹಾತ್ಮ ಗಾಂಧೀಜಿಯವರ ಪ್ರಕಾರ 'ಸಹಕಾರ' ಎಂದರೆ ಎಲ್ಲರ ಹಿತಕ್ಕಾಗಿ, ಎಲ್ಲರ ಸಮ್ಮತಿಯಿಂದ, ಎಲ್ಲರಿಂದ ಕೂಡಿದ ಒಂದು ಸುವ್ಯವಸ್ಥೆ—ಆರ್ಥಿಕ ಸ್ವಾತಂತ್ರ್ಯಕ್ಕೆ ಸಹ ಕಾರವೇ ಹೆಬ್ಬಾಗಿಲು" ಎಂದು ಅವರು ಹೇಳಿದರು. ರಾಷ್ಟ್ರದ

ಆರ್ಥಿಕ ಬೆಳವಣಿಗೆ ಮತ್ತು ಸಾಮಾಜಿಕ ನ್ಯಾಯದ ಗುರಿ ಯನ್ನು ಸಹಕಾರ ಸಾಧಿಸಿಕೊಡಬಲ್ಲದು. ಆರ್ಥಿಕ ಅಸಮಾನತೆ ಯನ್ನು ಹೋಗಲಾಡಿಸುವುದಷ್ಟೇ ಅಲ್ಲದೆ ರಾಷ್ಟ್ರೀಯ ಅಭಿವೃದ್ಧಿ ಕಾರ್ಯದಲ್ಲಿ ಬಹುಸಂಖ್ಯಾತರು ಭಾಗವಹಿಸಲು ಅವಕಾಶವನ್ನು ಕಲ್ಪಿಸಿಕೊಡುತ್ತದೆ. ಧನಿಕರು ಮತ್ತು ಬಡವರ ನಡುವಿನ ಅಂತರವನ್ನು ಅಳಿಸುವ ಏಕೈಕ ಸಾಧನವೆಂದರೆ ಸಹಕಾರ. ಸಹ ಕಾರದ ಧ್ವಜವು 'ಭಿನ್ನತೆಯಲ್ಲಿ ಏಕತೆ'ಯ ತತ್ವವನ್ನು ಸಾರು ಕಾಮನಬಿಲ್ಲಿನ 7 ಬಣ್ಣಗಳುಳ್ಳದ್ದು. ಕಾಮನಬಿಲ್ಲಿನ ಸಪ್ತ ವರ್ಣಗಳ ಈ ಧ್ವಜದ ಹಿನ್ನೆಲೆಯಲ್ಲಿ ಜಾತಿ, ಮತ, ವರ್ಣ ಜನಾಂಗಗಳ ಯಾವ ಭೇದವೂ ಇಲ್ಲ. ಸಹಕಾರವು ಇವೆಲ್ಲವ ಗಳನ್ನೂ ಮೆಟ್ಟಿನಿಂತ ಒಂದು ಸುವರ್ಣ ಮಾಧ್ಯಮವಾಗಿದೆ ಅಂದರೆ ಸಹಕಾರ ಪದ್ಧತಿಯು ಖಾಸಗೀ ವ್ಯವಹಾರ ಹಾಗೂ ಸಾರ್ವಜನಿಕ ವ್ಯವಹಾರ ಪದ್ಧತಿಗಳ ಒಂದು ಮಧ್ಯವರ್ತಿ ಯಾಗಿದೆ. ಹೇಗೆಂದರೆ ಖಾಸಗಿ ವ್ಯವಹಾರ ಪದ್ಧತಿಯ ಮುಖ್ಯ ಉದ್ದೇಶ 'ಲಾಭಗಳಿಕೆ.' ಸಾರ್ವಜನಿಕ ಕ್ಷೇತ್ರದ ಮುಖ್ಯ ಉದ್ದೇಶ 'ಸಮಾಜಕಲ್ಯಾಣ,' ಸಹಕಾರಿ ರಂಗದ ಮುಖ್ಯ ಉದ್ದೇಶ 'ಸೇವೆ'. ಮೇಲಿನ ಈ ಎರಡೂ ಪದ್ಧತಿಗಳಲ್ಲಿರು ನ್ಯೂನತೆಗಳನ್ನು ಹೋಗಲಾಡಿಸಲು ರೂಪುಗೊಂಡಿರುವ ಪದ್ಧ ತಿಯೇ ಸಹಕಾರಿ ಪದ್ಧತಿ. ಸಹಕಾರಿ ಪದ್ಧತಿಯ ಆಡಳಿ ನೀತಿಯೆಂದರೆ ಪ್ರಾಮಾಣಿಕತೆಯಿಂದ ಎಲ್ಲರ ಅಭ್ಯುದಯಕ್ಕಾ ಎಲ್ಲಾ ವ್ಯವಹಾರಗಳನ್ನು ನಡೆಸುವುದು. ಈ ವ್ಯವಸ್ಥೆಯಲ್ಲಿ ಲೇವಾದೇವಿ, ಕೃಷಿ ಕೈಗಾರಿಕೆಗಳು ಸಮಾಜಸೇವಾ ದೃಷ್ಟಿ ಯಿಂದ ನಡೆಯುವುವು. ಸಹಕಾರವು ಆರ್ಥಿಕವಾಗಿ ಹಿಂದುಳಿ ಸಮಾಜಗಳಿಗೆ ರಾಮಬಾಣವಾಗಿದೆ. ಜನ ಪರಸ್ಪರ ಸಹಾಯ

ಮೂಲಕ ತಮ್ಮ ಅಗತ್ಯಗಳನ್ನು ಈಡೇರಿಸಿಕೊಳ್ಳಲು ಪ್ರಜಾಪ್ರಭುತ್ವದ ಮಾರ್ಗದಲ್ಲಿ ಸಂಘಟಿಸಿದ ಸಂಸ್ಥೆ ಸಹಕಾರ. ಇಲ್ಲಿ ಸೇವೆಯೇ ಉತ್ಪಾದನೆ ಮತ್ತು ಹಂಚಿಕೆಯೇ ಉದ್ದೇಶ. ಎಲ್ಲರೂ ಒಟ್ಟಾಗಿ ಕಲೆತು ಉತ್ಪನ್ನ ಮಾಡಿದುದನ್ನು ಸಮನಾಗಿ ಪರಸ್ಪರ ಸಮ್ಮತಿಯಿಂದ ಹಂಚಿಕೊಳ್ಳುವುದರಿಂದ ಸಹಕಾರ ಪದ್ಧತಿಯಲ್ಲಿ ಯಾವ ತೊಂದರೆಯೂ ಸಂಭವಿಸುವುದಿಲ್ಲ. ಸಮನಾದ ಹಂಚಿಕೆ ಇರುವುದರಿಂದ ದುರಾಸೆ ಅಥವಾ ಜಿಪುಣತನಕ್ಕೆ ಇಲ್ಲಿ ಆಸ್ಪದವಿರುವುದಿಲ್ಲ. ಸರ್ವರಿಗೂ ಸಮಾನಾವಕಾಶಗಳನ್ನು ಒದಗಿಸಿಕೊಡುವುದೇ ಸಹಕಾರದ ಧ್ಯೇಯ. ಇದರ ಗುರಿ, ಆರ್ಥಿಕ ಉನ್ನತಿ ಅಥವಾ ಆರ್ಥಿಕಾಭಿವೃದ್ಧಿಯನ್ನು ಸಾಧಿಸುವುದಾಗಿದೆ. 'ಆರ್ಥಿಕಾಭಿವೃದ್ಧಿ' ಎಂದರೆ ಉತ್ಪನ್ನದಲ್ಲಿ ಹೆಚ್ಚಳ, ಆದಾಯದ ಅಸಮಾನತೆಯನ್ನು ಕಡಿಮೆ ಮಾಡುವುದು ಹಾಗೂ ಪೂರ್ಣ ಉದ್ಯೋಗ ಮಟ್ಟವನ್ನು ಮುಟ್ಟುವುದು. ಇದನ್ನು ಹೊಂದಬೇಕಾದರೆ, ಪ್ರತಿಯೊಬ್ಬರಲ್ಲೂ ಸಹಕಾರ ಭಾವನೆಯು ಬೆಳೆಯಬೇಕು. ಪ್ರತಿಯೊಬ್ಬರ ಜೀವನದೊಂದಿಗೆ ಸಹಕಾರವು ಸಮರಸವಾಗಬೇಕು. 'ಸಹಕಾರವೇ ಜೀವನ, ಜೀವನವೇ ಸಹಕಾರ' ಎಂಬ ತತ್ತ್ವವನ್ನು ಪ್ರತಿಯೊಬ್ಬನೂ ತನ್ನ ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು. ಅಭಿವೃದ್ಧಿಯು ಹಳ್ಳಿ ಹಳ್ಳಿಗೂ ವ್ಯಾಪಿಸಬೇಕು. ರಾಷ್ಟ್ರದ ಏಳಿಗೆಯ ಆಧಾರಸ್ತಂಭಗಳಾದ ರೈತರ ಉದ್ಧಾರವಾಗಬೇಕು. ನಾಡಿನ ಪ್ರಗತಿಯ ಪ್ರತೀಕಗಳಾದ, ದೇಶದ ಬೆನ್ನೆಲುಬುಗಳೆನಿಸಿದ ರೈತರು ಸಾಲದಲ್ಲಿ ಬಿದ್ದು ಕೊಳೆಯುತ್ತಿದ್ದರೆ ನಾಡು ಯಶಸ್ಸನ್ನು ಹೊಂದಲಾರದು. ಈ ದಿಸೆಯಲ್ಲಿ ರೈತರನ್ನು ಸಾಲದ ಕೂಪದಿಂದ ಮೇಲೆತ್ತಿ ಅವರ ಜೀವನಮಟ್ಟವನ್ನು ಸುಧಾರಿಸುವ ಉದ್ದೇಶದಿಂದ 1904ರಲ್ಲಿ

'ಸಹಕಾರ ಚಳುವಳಿಯು' ಪ್ರಾರಂಭಗೊಂಡಿತು. ಇದರ ಪರಿಣಾಮವೇ ಸಹಕಾರಿ ಸಂಸ್ಥೆಗಳ ಉಗಮ.

## ಸಹಕಾರಿ ಚಳುವಳಿಯ ಹುಟ್ಟು ಮತ್ತು ಬೆಳವಣಿಗೆ—ಸಹಕಾರಿ ಸಂಸ್ಥೆಗಳ ಉಗಮ

ಸಹಕಾರಿ ಚಳುವಳಿಯೆಂದರೆ ಆರ್ಥಿಕಬಲವಿಲ್ಲದವರಿಗೆ ಆರ್ಥಿಕಬಲವನ್ನು ಕೊಡುವ ಒಂದು ಪ್ರೇರಕ ಶಕ್ತಿ. ಇಂದು ವಿಶ್ವದ ಎಲ್ಲಾ ರಾಷ್ಟ್ರಗಳಲ್ಲೂ ಸಹಕಾರ ಪದ್ಧತಿಯನ್ನು ಕಾಣಬಹುದು. ಆದರೆ ಒಂದೊಂದು ರಾಷ್ಟ್ರದಲ್ಲಿ ಒಂದೊಂದು ಬಗೆಯ ಸಹಕಾರ ಪದ್ಧತಿಯು ವಿಶೇಷ ರೀತಿಯಲ್ಲಿ ಅಭಿವೃದ್ಧಿ ಹೊಂದಿದೆ. ಇಂಗ್ಲೆಂಡ್ ದೇಶವು ಸಹಕಾರಿ ಚಳುವಳಿಯ ತೌರುಮನೆ ಎಂದು ಹೇಳಬಹುದು. ಅಂದರೆ, ಸಹಕಾರಿ ಚಳುವಳಿಯು ಮೊಟ್ಟ ಮೊದಲು ಇಂಗ್ಲೆಂಡಿನಲ್ಲಿ ಆರಂಭವಾಯಿತು. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಕೈಗಾರಿಕಾ ಕ್ರಾಂತಿಯು ರೂಪುಗೊಂಡು ಇಂಗ್ಲೆಂಡಿನ ಆರ್ಥಿಕ,ರಾಜಕೀಯ ಹಾಗೂ ಸಾಮಾಜಿಕ ಜೀವನದ ಮೇಲೆ ಅಪಾರ ಪರಿಣಾಮ ಬೀರಿತು. ಇದರಿಂದಾಗಿ ಅನೇಕ ಯಂತ್ರಗಳನ್ನು ಕಂಡುಹಿಡಿಯಲಾಯಿತು. ಅಂದರೆ, ಯಂತ್ರಯುಗವು ಮನುಷ್ಯನ ಜೀವನದಲ್ಲಿ ಪ್ರವೇಶಿಸಿತು. ಇದರಿಂದ ಜನರ ದೇಹಬಲದ ಉಪಯೋಗ ಕಡಿಮೆಯಾಯಿತು ಮತ್ತು ಜನರ ನೆಮ್ಮದಿಯ ಜೀವನವು ಕಲಕಿತು. ಯಂತ್ರಗಳಿಂದಾಗಿ ಅನೇಕರು ತಮ್ಮ ನೌಕರಿಗಳನ್ನು ಕಳೆದುಕೊಂಡು ನಿರುದ್ಯೋಗಿಗಳಾದರು. ಬಂಡವಾಳಗಾರರಿಂದ ಕಾರ್ಮಿಕರು, ವರ್ತಕರಿಂದ ಗ್ರಾಹಕರು ಶೋಷಣೆಗೆ ಒಳಗಾದರು. ಜನರು ನಿರಾಶಾಜೀವಿಗಳಾದರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ

ಜನರಿಗೆ ಸಹಕಾರ ಮಾರ್ಗವನ್ನು ತೋರಿದ ಕೀರ್ತಿಯು ರಾಬರ್ಟ್ ಓವನ್ನರಿಗೆ ಸಲ್ಲಬೇಕಾಗಿದೆ. ಕಾರ್ಮಿಕರಲ್ಲಿ ಪರಸ್ಪರ ಸಹಕಾರ ಮನೋಭಾವವನ್ನು ಮೂಡಿಸಲು ಓವನ್ ಜನರಿಂದ ಹಣಕೂಡಿಸಿ ಅಂಗಡಿಗಳನ್ನು ಪ್ರಾರಂಭಿಸಿದನು. ಮಿತವ್ಯಯ ದಿಂದಾಗುವ ಪ್ರಯೋಜನಗಳನ್ನು ಜನರಿಗೆ ತಿಳಿಸಿದನು. ಕೂಲಿ ಗಾರರಿಗೆ ಸಹಕಾರ ಮಂತ್ರವನ್ನು ಉಪದೇಶಿಸಿ, ಅವರು ಪರಸ್ಪರ ಬೆಂಬಲದಿಂದ ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ಸಹಕಾರ ಸೌಧವನ್ನು ನಿರ್ಮಿಸಿದನು. ಇದರಿಂದ ವ್ಯಾಪಾರಕ್ಕೆ ಬಂಡವಾಳವು ಸುಲಭವಾಗಿ ದೊರೆತು ಜನರಿಗೆ ಸಹಕಾರ ದಿಂದಾಗುವ ಲಾಭಗಳ ಬಗ್ಗೆ ವಿಶ್ವಾಸ ಉಂಟಾಯಿತು. ಕಾರ್ಮಿಕರು ಮತ್ತು ಮಾಲೀಕರ ಮಧ್ಯೆ ಪರಸ್ಪರ ಪ್ರೀತಿ, ವಿಶ್ವಾಸ ಹುಟ್ಟುವಂತಾಯಿತು. ಅನಂತರ ಓವನ್ನನ ಮಾರ್ಗವನ್ನು ಅನುಸರಿಸಿ ಲಂಕಾಷೈರಿನ ರಾಕ್‌ಡೇಲಿನ 28 ಜನ ನೇಕಾರ ಅಗ್ರಗಾಮಿಗಳು ವರ್ತಕರಿಂದ ಶೋಷಣೆಗೊಳಗಾಗಿ ಅದರ ಪರಿಹಾರಕ್ಕಾಗಿ ಒಂದೊಂದು ಪೌಂಡ್ ಬಂಡವಾಳ ತೊಡಗಿಸಿ ಒಂದು ಸಂಘವನ್ನು ಸ್ಥಾಪಿಸಿದರು. ವರ್ತಕರಿಂದ ವಂಚಿತರಾಗಿ ಪ್ರಾರಂಭಿಸಿದ ಈ ಸಂಸ್ಥೆಗೆ 'ಸಹಕಾರ ಸಂಘ' ಎಂದು ನಾಮ ಕರಣ ಮಾಡಿದರು. ಇವರು ಮುಂದೆ ಸಹಕಾರದ ಚರಿತ್ರೆಯಲ್ಲಿ 'ರಾಕ್ ಡೇಲಿನ ಅಗ್ರಗಾಮಿಗಳು' ಎಂದು ಪ್ರಸಿದ್ಧರಾದರು. ಈ ರೀತಿಯ ಸಂಘಗಳ ಆರ್ಥಿಕ ಕ್ಷೇತ್ರದಲ್ಲಿ ನಷ್ಟಕ್ಕೆ ಅವಕಾಶ ವಿಲ್ಲದಿದ್ದುದರಿಂದ ಸಹಕಾರಿ ಚಳುವಳಿಯು ತುಂಬಾ ಅಭಿವೃದ್ಧಿ ಯನ್ನು ಹೊಂದಿತು. ಇಂಗ್ಲೆಂಡಿನ ಈ ಅದ್ಭುತ ಸಾಹಸದಿಂದ ಪ್ರೇರೇಪಿತಗೊಂಡ ಇತರ ರಾಷ್ಟ್ರಗಳು ಸಹಕಾರ ಸಂಘಗಳನ್ನು ಸ್ಥಾಪಿಸಲು ಮುಂದೆ ಬಂದವು. ಈ ರೀತಿ ರಾಬರ್ಟ್ ಓವನ್

ಹುಟ್ಟುಹಾಕಿದ ಸಹಕಾರ ಪದ್ಧತಿಯ ಬೀಜವು ಮೊದಲು ಇಂಗ್ಲೆಂಡಿನಲ್ಲಿ ಬೆಳೆದು ಅನಂತರ ವಿಶ್ವದಲ್ಲೆಲ್ಲಾ ವ್ಯಾಪಿಸಿತು. ಹೀಗೆ ಬಂಡವಾಳಶಾಹಿ ಪದ್ಧತಿಯಲ್ಲಿನ ನ್ಯೂನತೆಗಳು ಹಾಗೂ ಕಾರ್ಮಿಕರ ಮತ್ತು ಗ್ರಾಹಕರ ಶೋಷಣೆಯು ಸಹಕಾರಿ ಚಳುವಳಿಗೆ ದಾರಿ ಮಾಡಿಕೊಟ್ಟು ಸಹಕಾರಿ ಸಂಸ್ಥೆಗಳ ಉಗಮಕ್ಕೆ ಕಾರಣವಾಯಿತು. ಸಹಕಾರ ಪದ್ಧತಿಯ ಬೆಳವಣಿಗೆಯ ಬಗ್ಗೆ ಹೇಳುವುದಾದರೆ ಒಂದೊಂದು ದೇಶದಲ್ಲಿ ಒಂದೊಂದು ಬಗೆಯ ಸಹಕಾರ ಸಂಘಗಳು ಮುಂದೆ ಬಂದಿವೆ. ಇಂಗ್ಲೆಂಡಿನಲ್ಲಿ ಗ್ರಾಹಕರ ಸಂಘಗಳು, ಡೆನ್ಮಾರ್ಕಿನಲ್ಲಿ ಉತ್ಪಾದಕರ ಸಂಘಗಳು, ಜರ್ಮನಿಯಲ್ಲಿ ಲೇವಾದೇವಿ ಸಂಘಗಳು ಈ ರೀತಿ ತಮ್ಮದೇ ಆದ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿವೆ.

ಇಂದು ಭಾರತದಲ್ಲಿ ಕಂಡುಬರುತ್ತಿರುವ ಸಹಕಾರಿ ಸಂಸ್ಥೆಗಳು ಭಾರತೀಯ ಮೂಲದಿಂದ ಬಂದುವಲ್ಲ. ಅವು ವಿದೇಶೀಯ ಮೂಲಗಳಿಂದ ಅನುಕರಣ ಮಾಡಿದವು. ಸಹಕಾರಿ ಸಂಘಗಳ ಮೂಲಕ ಇಂಗ್ಲೆಂಡ್ ದೇಶವು ಪ್ರವರ್ಧಮಾನಕ್ಕೆ ಬಂದುದರಿಂದ ಉತ್ತೇಜನಗೊಂಡು ಭಾರತ ಸರಕಾರವು 1904ರಲ್ಲಿ ಸಹಕಾರ ಪದ್ಧತಿಯನ್ನು ಜಾರಿಗೆ ತಂದಿತು. ಇದರ ಮುಖ್ಯ ಉದ್ದೇಶ ದೇಶದ ಹಾಗೂ ಜನರ ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದಾಗಿತ್ತು.

ಭಾರತದಲ್ಲಿ ಸಹಕಾರಿ ಚಳುವಳಿಯ ಬೆಳವಣಿಗೆಗೆ ಸರಕಾರವು ಬಹಳಷ್ಟು ಶ್ರಮಿಸಿತು ಎಂದು ಹೇಳಬಹುದು. ಸಹಕಾರಕ್ಕೆ ಸರಕಾರದಿಂದ ಬಹಳಷ್ಟು ಬೆಂಬಲ ದೊರೆಯುತ್ತಿದೆ. ಇಂತಹ ಬೆಂಬಲವು ಬೇರೆ ಯಾವುದೇ ರಾಷ್ಟ್ರದಲ್ಲೂ ಸರಕಾರದಿಂದ ಸಹಕಾರಕ್ಕೆ ದೊರೆತಿಲ್ಲವೆನ್ನಬಹುದು.

1892ರಲ್ಲಿ ಸರಕಾರವು ಸಹಕಾರ ಸಂಸ್ಥೆಗಳ ಸ್ಥಾಪನೆಯ ವಿಷಯದಲ್ಲಿ ಸೂಕ್ತವಾದ ಸಲಹೆಗಳನ್ನು ನೀಡಲು ಫ್ರೆಡರಿಕ್ ನಿಕೋಲ್ ಸನ್ ಎಂಬ ಅಧಿಕಾರಿಯನ್ನು ನೇಮಿಸಿತು. ರೈತರನ್ನು ಸಾಲದಿಂದ ಮತ್ತು ಲೇವಾದೇವಿ ಮಾಡುವವರ ಹಿಡಿತದಿಂದ ಪಾರುಮಾಡಲು ಸಹಕಾರ ಸಂಸ್ಥೆಗಳನ್ನು ಸ್ಥಾಪಿಸಬೇಕೆಂದೂ, ಇದರಿಂದ ಆರ್ಥಿಕ ಸಾಮರ್ಥ್ಯವಿಲ್ಲದವರು ಒಂದುಗೂಡಿ ಪರಸ್ಪರ ಸಹಾಯ-ಸಹಕಾರಗಳಿಂದ ತಮ್ಮ ಆರ್ಥಿಕ ಸಮಸ್ಯೆಗಳನ್ನು ಹೋಗಲಾಡಿಸಿಕೊಳ್ಳಬಹುದೆಂದೂ ನಿಕಲ್ ಸನ್ ಅಭಿಪ್ರಾಯ ಪಟ್ಟರು. ಈ ವರದಿಯ ಆಧಾರದ ಮೇಲೆ ಸಾಲಕೊಡುವ ಸಹಕಾರ ಸಂಸ್ಥೆಗಳನ್ನು ಸ್ಥಾಪಿಸಲು ಸರಕಾರವು 1904ರಲ್ಲಿ ಶಾಸನ ಮಾಡಿತು. ಮೊದಲು ಸಾಲವನ್ನು ಕೊಡುವ ಸಂಸ್ಥೆಗಳ ಸ್ಥಾಪನೆಗೆ ಶಾಸನವನ್ನು ಮಾಡಿದ್ದು, ಕಾಲಕ್ರಮೇಣ ಸಾಲ ಕೊಡುವ ವ್ಯವಸ್ಥೆಯನ್ನು ಇತರ ಕ್ಷೇತ್ರಗಳಿಗೆ ವಿಸ್ತರಿಸ ಲಾಯಿತು. ಈ ಸಾಲದ ಸಹಕಾರಿ ಸಂಸ್ಥೆಗಳೇ ಇಂದಿನ ಸಹಕಾರಿ ಸಂಸ್ಥೆಗಳ ಮೂಲ ಸ್ವರೂಪವೆನ್ನಬಹುದು. ಈ ರೀತಿ ಸಹಕಾರ ಚಳುವಳಿಯು 1904ರಲ್ಲಿ ಭಾರತದಲ್ಲಿ ಪ್ರಾರಂಭವಾಯಿತು. 1947ರಲ್ಲಿ ಸ್ವಾತಂತ್ರ್ಯಗಳಿಕೆಯ ನಂತರ ಭಾರತದಲ್ಲಿ ಸಹಕಾರ ಚಳುವಳಿಯು ಸ್ವಯಂ ಸ್ಫೂರ್ತಿಯಿಂದ ಪ್ರಗತಿಹೊಂದಲು ಪ್ರಾರಂಭಿಸಿತು. 1951ರಲ್ಲಿ ಸಹಕಾರದ ತಳಹದಿಯ ಮತ್ತು ಸಹಕಾರದ ಮೂಲಮಂತ್ರದ ಆಧಾರದ ಮೇಲೆ ಯೋಜನೆಗಳು ರೂಪುಗೊಂಡು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳ ಲಾಯಿತು. ಈಗ ನಮ್ಮ ದೇಶದಲ್ಲಿ ಸುಮಾರು 3 ಲಕ್ಷ ಸಹಕಾರಿ ಸಂಸ್ಥೆಗಳು ಕೆಲಸಗಳನ್ನು ನಿರ್ವಹಿಸುತ್ತಿವೆ. ಇಂದು ಸಹಕಾರಿ ಬೇಸಾಯ ಸಂಸ್ಥೆಗಳು, ವ್ಯಾಪಾರಾಟ ಸಂಸ್ಥೆಗಳು, ಸಾಲ ನೀಡುವ

ಸಂಸ್ಥೆಗಳು, ಸಹಕಾರಿ ಬ್ಯಾಂಕುಗಳು, ಸಹಕಾರಿ ಸಕ್ಕರೆ ಕಾರ್ಖಾನೆಗಳು, ಪಶುಸಂಗೋಪನೆ, ಸಹಕಾರಿ ಗೃಹನಿರ್ಮಾಣ ಸಂಸ್ಥೆಗಳು ಹೀಗೆ ಅನೇಕ ಸಹಕಾರಿ ಸಂಸ್ಥೆಗಳು ಜನತೆಯ ಹಿತಕ್ಕಾಗಿ ಶ್ರಮಿಸುತ್ತಿವೆ.

ಈ ರೀತಿ ಸ್ವತಂತ್ರಭಾರತದಲ್ಲಿ ಸಹಕಾರ ಚಳುವಳಿಯು ಹುಟ್ಟಿ ಬೆಳೆದು ಬಲಗೊಳ್ಳುತ್ತಿರುವುದು ಮುಖ್ಯವಾಗಿ ಸರಕಾರದ ಬೆಂಬಲದಿಂದ. ಕೇಂದ್ರ ಹಾಗೂ ರಾಜ್ಯಸರಕಾರಗಳು ಸಹಕಾರದ ಬೆಳವಣಿಗೆಯಲ್ಲಿ ಬಹಳ ಮುಖ್ಯವಾದ ಪಾತ್ರವಹಿಸುತ್ತಿವೆ. ಸಹಕಾರದಿಂದ ಪ್ರಜೆಗಳ ಆರ್ಥಿಕ ಹಾಗೂ ನೈತಿಕ ಜೀವನವು ಉತ್ತಮಗೊಳ್ಳುವುದೆಂಬ ದೃಢವಾದ ನಂಬಿಕೆ ಇರುವುದರಿಂದ ಸರಕಾರವು ದೇಶಪಾದ್ಯಂತ ಸಹಕಾರದ ಪ್ರಚಾರವನ್ನು ಕೈ ಗೊಂಡಿದೆ. ಇದರಿಂದ ಸಾಕಷ್ಟು ಪ್ರತಿಫಲವೂ ದೊರೆಯುತ್ತಿದೆ. ಆದರೆ ನಮ್ಮ ದೇಶದ ಸಹಕಾರಿ ಚಳುವಳಿಯ ದೊಡ್ಡ ಕೊರತೆ ಯೆಂದರೆ ಅದು ದೇಶದ ಒಳಗಿನಿಂದ ಹುಟ್ಟಿಬಂದುದಲ್ಲ. ಆದುದ ರಿಂದಲೇ ಈ ಚಳುವಳಿ ಪ್ರಾರಂಭವಾಗಿ ಸುಮಾರು 76 ವರ್ಷ ಗಳಾದರೂ ಇನ್ನೂ ಕುಂಟುತ್ತಾ ನಡೆಯುತ್ತಿದೆ. ಪ್ರಜಾ ಪ್ರಭುತ್ವದ ತತ್ವವನ್ನು ಅಳವಡಿಸಿಕೊಂಡು ಪ್ರಾರಂಭವಾಗಿರುವ ಸಹಕಾರಿ ಚಳುವಳಿಯು ಮುಗ್ಗರಿಸಿದರೆ ನಮ್ಮ ದೇಶದ ಪ್ರಜಾ ಪ್ರಭುತ್ವದ ಅಡಿಗಲ್ಲು ಕುಸಿದು ಬೀಳುತ್ತವೆ. ಆದ್ದರಿಂದ ಸಹಕಾರ ಚಳುವಳಿ, ಜನತಾ ಚಳುವಳಿಯಾಗಿ ಮಾರ್ಪಡಬೇಕು. ಆಗ ದೇಶದ ಆರ್ಥಿಕ ಅಸಮಾನತೆಗಳನ್ನು ಹೋಗಲಾಡಿಸಲು ಸಾಧ್ಯ.

## ರೈತರ ಸಮಸ್ಯೆಗಳು

ನಮ್ಮ ದೇಶದ ರೈತರು ಬಡವರು, ಅಜ್ಞರು, ಮೂ

ನಂಬಿಕೆಗಳನ್ನು ಹೊಂದಿರುವವರು. ಭೂಮಿಯನ್ನು ಉತ್ತು, ಬಿತ್ತು, ಸಾಗುವಳಿಯನ್ನು ಮಾಡಲು ಅನೇಕ ಸಾಧನಗಳು ಅವಶ್ಯವಾಗಿ ಬೇಕಾಗುತ್ತವೆ. ಇವುಗಳ ಹೊರತು ಕೃಷಿಯು ಕೆಲಸ ನಡೆಯಲಾರದು. ಇವುಗಳಲ್ಲಿ ಮುಖ್ಯವಾದವು ನೇಗಿಲುಗಳು, ಎತ್ತುಗಳು, ಬೀಜಗಳು, ಗೊಬ್ಬರಗಳು ಮುಂತಾದವು. ಭಾರತ ವರ್ಷದ ರೈತರ ಬಡತನದ ಬವಣೆಯು ಎಷ್ಟಿದೆ ಎಂದರೆ ಕೆಲವರ ಬಳಿ ನೇಗಿಲುಗಳಿದ್ದರೆ ಎತ್ತುಗಳಿರುವುದಿಲ್ಲ. ನೇಗಿಲು-ಎತ್ತುಗಳಿದ್ದರೆ ಸುಧಾರಿಸಿದ ಬೀಜಗಳು, ಗೊಬ್ಬರಗಳು ಇರುವುದಿಲ್ಲ. ಒಂದು ವೇಳೆ ಇವೆಲ್ಲವೂ ಇದ್ದಿತೆಂದುಕೊಂಡರೆ ಕೃಷಿಗೆ ಅತ್ಯಂತ ಮುಖ್ಯವಾಗಿ ಬೇಕಾದ ನೀರಾವರಿ ಸೌಲಭ್ಯವಿರುವುದಿಲ್ಲ. ಅಲ್ಲದೆ ಭಾರತದಲ್ಲಿ ಕೃಷಿಯೆಂದರೆ ಮಳೆಯೊಡನೆ ಜೂಜಾಡಿದಂತೆ. ಕೆಲವೊಮ್ಮೆ ಮಳೆಯೇ ಇಲ್ಲವೆ ಬೆಳೆಯಾಗದಿದ್ದರೆ ಮತ್ತೆ ಕೆಲವು ಬಾರಿ ಮಳೆಯ ಮಹಾಪೂರ ಬಂದು ಕೊಯ್ಲಿಗೆ ಬಂದ ಬೆಳೆಯನ್ನೇ ಅಲ್ಲದೆ ಭೂಮಿಯ ಫಲವತ್ತತೆಯ ಸಾರದೊಂದಿಗೆ ಹಳ್ಳಿಗಳನ್ನೇ ಕೊಚ್ಚಿಕೊಂಡು ಹೋಗಿ ಬಿಡುವ ಸಂಭವವುಂಟು. ಇವಕ್ಕೆಲ್ಲಾ ಕಳಸವಿಟ್ಟಂತೆ. ದುರ್ಭಿಕ್ಷದಲ್ಲಿ ಅಧಿಕ ಮಾಸವೆಂಬಂತೆ ಬೆಳೆಗಳಿಗೆ ಕೀಟಗಳಿಂದ ರೋಗಗಳು ತಗುಲಿ ಬೆಳೆಗಳು ನಾಶವಾಗುವುದೂ ಉಂಟು. ಈ ರೀತಿ ಕೃಷಿಯ ಕಾರ್ಯಕ್ರಮಗಳನ್ನು ಕೈಗೊಳ್ಳಲು ಅನೇಕ ಅಡಚಣೆಗಳಿದ್ದರೂ ಸಹ ರೈತರು ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನು ಮಾಡಲೇ ಬೇಕಾಗುತ್ತದೆ. ಇದಕ್ಕಾಗಿ ಕೃಷಿಯ ಉಪಕರಣಗಳನ್ನು, ಸುಧಾರಿಸಿದ ಬೀಜಗಳನ್ನು ಕೊಳ್ಳಲು ಹಾಗೂ ಪ್ರತಿವರ್ಷವೂ ಮೆಕ್ಕಲು ಮಣ್ಣು ಕೊಚ್ಚಿಕೊಂಡು ಹೋಗದಂತೆ ಒಡ್ಡು ಹಾಕಲು, ಜೊತೆಗೆ ದೈನಂದಿನ ಕಾರ್ಯಗಳಿಗೆ, ಕುಟುಂಬದ ಪೋಷಣೆಯ

ನಿರ್ವಹಣೆಗೆ ರೈತರಿಗೆ ಹಣ ಬೇಕಾಗುತ್ತದೆ. ಹಣದ ಕೊರ
ಯನ್ನು ಹೊಂದಿರುವ ರೈತರು ಈ ಕಾರ್ಯಗಳಿಗೆ ಸಾಲವನ
ಮಾಡಲೇ ಬೇಕಾಗುತ್ತದೆ. ನಮ್ಮ ರೈತರ ಸಮಸ್ಯೆಗಳ
ಮುಖ್ಯವಾದುದೆಂದರೆ ಸಾಲ-ಸೌಲಭ್ಯಗಳ ಕೊರತೆ. ರೈತ
ಭೂ ಹಿಡುವಳಿಗಳು (Land Holdings) ಚಿಕ್ಕವುಗಳಾಗಿರ
ವುದರಿಂದ ಆಧುನಿಕ ರೀತಿಯಲ್ಲಿ ಕೃಷಿಯನ್ನು ಮಾಡಲಾಗ
ವುದಿಲ್ಲ. ಇದರಿಂದಾಗಿ ರೈತರು ಹೊಸ ತಾಂತ್ರಿಕ ಜ್ಞಾನವನ
ಬಳಸಿಕೊಳ್ಳಲಾರದೆ ಹಿಂದುಳಿದಿದ್ದಾರೆ. ಹಣದ ಕೊರ
ಇರುವುದರಿಂದ ಸಣ್ಣ ಹಿಡುವಳಿಗಳನ್ನು ಒಟ್ಟುಗೂಡಿ
ಉತ್ಪಾದನೆ ಹೆಚ್ಚಿಸಲು ಸಾಲವು ಅತ್ಯವಶ್ಯವಾಗಿದೆ. ಹಣ
ಅಡಚಣೆಯಿಂದ ದಿಕ್ಕುಗಾಣದ ರೈತರು ಇದಕ್ಕಾಗಿ ಹಳ್ಳಿಯ
ಸಾಹುಕಾರರ ಮೊರೆ ಹೋಗುತ್ತಾರೆ. ಜಮೀನುಗಳ ಆಧಾರ
ಮೇಲೆ ಸಾಹುಕಾರರು ಸಾಲ ಕೊಡುತ್ತಾರೆ, ಮತ್ತು ಇದಕ
ಹೆಚ್ಚು ಬಡ್ಡಿಯನ್ನು ಪಡೆಯುತ್ತಾರೆ. ರೈತರ ಸಂಪಾದನೆಯ
ಹಣವೆಲ್ಲವೂ ಸಾಹುಕಾರರ ಬಡ್ಡಿಗೇ ಹೋಗುತ್ತದೆ. ಹೀಗೆ ಶ್ರಮ
ಒಬ್ಬರದು ಅದರ ಫಲ ಇನ್ನೊಬ್ಬರದಾಗುವುದರಿಂದ ರೈತರ
ಆಸಕ್ತಿ, ಉತ್ಸಾಹಗಳನ್ನು ಕಳೆದುಕೊಂಡು ಯಾಂತ್ರಿಕ ಬದುಕನ
ನಡೆಸುತ್ತಾರೆ. ಈ ರೀತಿಯಾಗಿ ಸಾಹುಕಾರರಿಂದ ಪಡೆದ ಸಾ
ವನ್ನು ರೈತರು ಸುಗ್ಗಿಯ ವೇಳೆಯಲ್ಲಿ ತೀರಿಸಬೇಕಾಗುತ್ತದೆ
ಆದ್ದರಿಂದ ರೈತರು ತಮ್ಮ ಆಹಾರ ಧಾನ್ಯಗಳನ್ನು ಆ ಕಾಲದಲ್ಲಿ
ಮಾರಾಟ ಮಾಡಬೇಕಾಗುತ್ತದೆ. ಆದರೆ ಆಗ ಸಾಮಾನ್ಯವಾ
ಧಾನ್ಯಗಳ ಬೆಲೆಗಳು ಬಹಳ ಕಡಿಮೆ ಇರುತ್ತವೆ. ಏಕೆಂದರೆ ಈ
ಕಾಲದಲ್ಲಿ ಎಲ್ಲರ ಬಳಿಯಲ್ಲೂ ಅಲ್ಪಸ್ವಲ್ಪ ಧಾನ್ಯಗಳಿದ್ದು ಎಲ್ಲರು
ಮಾರಾಟ ಮಾಡುವವರೇ ಆಗಿರುತ್ತಾರೆ. ಒಂದು ವೇಳೆ ರೈತರ

ಕಡಿಮೆ ಬೆಲೆಗೆ ಧಾನ್ಯಗಳನ್ನು ಮಾರಲಿಚ್ಛಿಸದೆ ಪಟ್ಟಣದ ಮಾರು ಕಟ್ಟೆಗೆ ಧಾನ್ಯಗಳನ್ನು ತೆಗೆದುಕೊಂಡು ಹೋದರೆ ಅಲ್ಲಿ ದಲ್ಲಾಲಿ ಗಳ ಕೈಗೆ ಸಿಕ್ಕಬೇಕಾಗುತ್ತದೆ. ದಲ್ಲಾಲಿಗಳು, (Brokers) ವರ್ತಕರು ಲಾಭ ಪಡೆಯುವ ಉದ್ದೇಶದಿಂದ ಕಪಟವನ್ನರಿಯದ ರೈತರನ್ನು ಮೋಸಗೊಳಿಸಿ ಆಹಾರ ಧಾನ್ಯಗಳನ್ನು ಕಡಿಮೆ ಬೆಲೆಗೆ ಮಾರುವಂತೆ ಮಾಡುತ್ತಾರೆ. ರೈತರ ಬಡತನ ಮತ್ತು ಅಜ್ಞಾನದ ಲಾಭವನ್ನು ಪೂರ್ಣವಾಗಿ ಪಡೆಯುತ್ತಾರೆ. ಈ ರೀತಿ ಶ್ರಮಕ್ಕೆ ತಕ್ಕ ಫಲ ಸಿಕ್ಕದೆ, ಕೈತುಂಬಾ ಹಣ ದೊರೆಯದೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಶಾಂತಿಯನ್ನು ಕಳೆದು ಕೊಂಡು ಹಣದ ಮುಗ್ಗಟ್ಟಿನಿಂದ ಜರ್ಝರಿತರಾಗುವ ರೈತರು ಹೆಚ್ಚು ಬೆಳೆಯನ್ನು ಬೆಳೆಯಲು ಉತ್ಸಾಹಹೀನರಾಗುವುದು ಸಹಜ. ಆರ್ಥಿಕ ಮುಗ್ಗಟ್ಟಿನಿಂದ ಸಾಲದ ಹೊರೆ ಹೊತ್ತ ರೈತ ರಿಂದ ದೇಶದ ಆರ್ಥಿಕ ಪರಿಸ್ಥಿತಿ ಸುಧಾರಿಸುವುದೆಂತು? ರಾಷ್ಟ್ರದ ಆರ್ಥಿಕ ಪ್ರಗತಿಯ ರಂಗಮಂಟಪದಲ್ಲಿ ಬಹು ದೊಡ್ಡ ಪಾತ್ರ ವಹಿಸುವ ರೈತರು ಬಡತನದ ಬವಣೆಯಿಂದ ನರಳುತ್ತಿರುವುದು ನಿಜಕ್ಕೂ ತುಂಬಾ ಶೋಚನೀಯ. ನಮ್ಮ ರಾಷ್ಟ್ರದ ಆರ್ಥಿಕ ಪ್ರಗತಿಯಾಗಬೇಕಾದರೆ ಮೊಟ್ಟಮೊದಲು ದಾರಿದ್ರ್ಯದ ಪ್ರತಿ ರೂಪದಂತಿರುವ ರೈತರ ಉದ್ಧಾರವಾಗಬೇಕು. ಆಗಲೇ ಕೃಷಿಯ ಅಭಿವೃದ್ಧಿಯಾಗಲು ಸಾಧ್ಯ.

## ಸಾಲದ ಮೂಲಗಳು

ಅಧಿಕ ಕೃಷಿಯೋತ್ಪಾದನೆಯಲ್ಲಿ ಮತ್ತು ಅಧಿಕ ವರಮಾನ ದಿಂದ ಜೀವನಮಟ್ಟದ ಹೆಚ್ಚಳವನ್ನುಂಟುಮಾಡುವಲ್ಲಿ ಸಾಲ ವೊಂದು ಮಹತ್ವದ ಅಂಶವಾಗಿದೆ. ಇಂದಿನ ಪ್ರಪಂಚದಲ್ಲಿ

ಎಲ್ಲಾ ಬಗೆಯ ಉದ್ದಿಮೆಗಳು, ವ್ಯಾಪಾರಗಳು, ಸಾಲದ ಹಣ ಮೇಲೆ ಅವಲಂಬಿತವಾಗಿರುತ್ತವೆ. ಕೃಷಿಯೂ ಇದಕ್ಕೆ ಹೊರತ ಯಂತ್ರಕ್ಕೆ ಇಂಧನವು ಎಷ್ಟು ಅವಶ್ಯಕವೋ ರೈತರಿಗೆ ಸಾಲ ಹಣವು ಅಷ್ಟೇ ಅವಶ್ಯಕವಾಗಿದೆ. ಭಾರತದಂತಹ ಅನಭಿವೃ ಹೊಂದಿದ ರಾಷ್ಟ್ರದಲ್ಲಿ ರೈತರು ಸಾಲ ಪಡೆಯುವುದು ಅಷ್ಟೇ ಅತಿಶಯೋಕ್ತಿಯಲ್ಲ.

ಅಖಿಲ ಭಾರತ ಗ್ರಾಮಾಂತರ ಸಾಲ ಪರಿಶೀಲನಾ ಸಮಿತಿ (All India Rural Credit Survey) ವರದಿಯ ಪ್ರಕಾ ರೈತರ ಸಾಲದ ಮೂಲಗಳು ಸರಕಾರ, ವಾಣಿಜ್ಯ ಬ್ಯಾಂಕುಗಳು ಜಮೀನ್ದಾರರು, ರೈತರು, ಹಳ್ಳಿಯ ಸಾಹುಕಾರರು, ಕಸಬುದಾ ಸಾಹುಕಾರರು, ವ್ಯಾಪಾರಸ್ಥರು, ನೆಂಟರಿಷ್ಟರು ಹಾಗೂ ಸ ಕಾರಿ ಸಂಸ್ಥೆಗಳೆಂಬುದಾಗಿ ತಿಳಿದುಬಂದಿದೆ.

| ಸಾಲದ ಮೂಲ | ಸಾಲದ ಹಣ (ಕೋಟಿ ರೂ.) | ಸಾಲದ ಶೇ ಪ್ರಮಾ |
|---|---|---|
| ಸರಕಾರ | 35 | 3.3 |
| ವಾಣಿಜ್ಯ ಬ್ಯಾಂಕುಗಳು | 7 | 0.9 |
| ಜಮೀನ್ದಾರರು | 11 | 1.5 |
| ರೈತ ಸಾಹುಕಾರರು | 187 | 24.9 |
| ಕಸಬುದಾರ ಸಾಹುಕಾರರು | 336 | 44.8 |
| ವ್ಯಾಪಾರಸ್ಥರು | 41 | 5.5 |
| ಇತರರು | 110 | 16.0 |
| ಸಹಕಾರ ಸಂಸ್ಥೆಗಳು | 23 | 3.1 |
| ಒಟ್ಟು | 750 ಕೋಟಿ ರೂ. | 100.0 |

**ಸರಕಾರ :**

ಕೃಷಿ ಮಾಡುವ ರೈತರಿಗೆ ಸರಕಾರವು ಕೊಡುವ ಸಾಲಕ್ಕೆ 'ತಕಾವಿ ಸಾಲ'ವೆಂದು ಹೆಸರು. ಸರಕಾರದಿಂದ ರೈತರು ಶೇಕಡ 3.3ರಷ್ಟು ಸಾಲ ಪಡೆಯುತ್ತಾರೆಂದು ತಿಳಿದುಬಂದಿದೆ. 1883ರಲ್ಲಿ ಭಾರತ ಸರಕಾರವು ಭೂ ಅಭಿವೃದ್ಧಿಯ ಮಸೂದೆಗಳನ್ನು ಜಾರಿಗೆ ತಂದು ರೈತರಿಗೆ 30 ವರ್ಷಗಳ ದೀರ್ಘಾವಧಿಯ ಸಾಲಗಳನ್ನು ಕೊಡಲು ಅವಕಾಶ ಮಾಡಿಕೊಟ್ಟಿತು. ಆದರೆ ಈ ರೀತಿಯ ದೀರ್ಘಾವಧಿಯ ಸಾಲಗಳಿಂದ ರೈತರ ಅವಶ್ಯಕತೆಗಳನ್ನು ಪೂರೈಸಲಾಗದೆಂದು ಕಂಡುಬಂದದ್ದರಿಂದ 1884ರಲ್ಲಿ ಬೇಸಾಯ ಸಾಲಗಾರರ ಸಾಲಗಳ ಕಾಯಿದೆಯ ಪ್ರಕಾರ ಅಲ್ಪಾವಧಿ ಹಾಗೂ ಮಧ್ಯಮಾವಧಿ ಸಾಲಗಳನ್ನು ಕೊಡಲು ತೀರ್ಮಾನಿಸಲಾಯಿತು. ಈ ಮಸೂದೆಯ ಪ್ರಕಾರ ರೈತರಿಗೆ ಗೊಬ್ಬರಗಳು, ಬೀಜಗಳು ಹಾಗೂ ಯಂತ್ರೋಪಕರಣಗಳನ್ನು ಕೊಂಡುಕೊಳ್ಳಲು ಸಾಲ ದೊರೆಯುವಂತಾಯಿತು. ಇದರಲ್ಲಿ ಬಂದ ತೊಡಕೆಂದರೆ ರೈತರಿಗೆ ಕಡಿಮೆ ಬಡ್ಡಿಗೆ ಸಾಲ ದೊರೆತರೂ ಸಾಲ ಪಡೆಯುವ ಮುನ್ನ ಹೆಚ್ಚು ಹಣವನ್ನು ವೆಚ್ಚಮಾಡಬೇಕಾಗಿ ಬರುತ್ತದೆ. ಆದ್ದರಿಂದ ಈ ರೀತಿಯ ಸಾಲಗಳು ನಮ್ಮ ರೈತರಲ್ಲಿ ಹೆಚ್ಚು ಜನಪ್ರಿಯವಾಗಿಲ್ಲ. ಇದಲ್ಲದೆ ತಕಾವಿ ಸಾಲಗಳನ್ನು ಕ್ಷಾಮ ಪರಿಸ್ಥಿತಿ ಉಂಟಾದಾಗ ಮಾತ್ರ ಕೊಡುವ ಪದ್ಧತಿ ಇದೆ. ಸಹಕಾರ ಸಂಸ್ಥೆಗಳು ಯಾವ ಉದ್ದೇಶ, ಧ್ಯೇಯಗಳನ್ನಿಟ್ಟುಕೊಂಡು ಸಾಲ ಕೊಡುವುವೋ ಅದೇ ಉದ್ದೇಶಗಳನ್ನಿಟ್ಟುಕೊಂಡೇ ಸರಕಾರವೂ ಸಹ ರೈತರಿಗೆ ಸಾಲ ಕೊಡುತ್ತದೆ. ಆದರೆ ಮೇಲಿನ ಕಾರಣಗಳಿಂದಾಗಿ ಸರಕಾರ ಕೊಡುವ ಸಾಲಗಳತ್ತ ರೈತರ ಒಲವು ಹೆಚ್ಚಾಗಿ ಹರಿದಿಲ್ಲ. ಆದ್ದರಿಂದ 1961ರಲ್ಲಿ

ನೇಮಕಗೊಂಡ 'ತಕಾವಿ ಸಾಲ ಹಾಗೂ ಸಹಕಾರ ಸಾಲ
ಸಮಿತಿಯು ಇನ್ನು ಮುಂದೆ ತಕಾವಿ ಸಾಲಗಳನ್ನು ರೈತರಿಗೆ ನೆ
ವಾಗಿ ಕೊಡುವುದನ್ನು ನಿಲ್ಲಿಸಿ ಸಹಕಾರ ಸಂಘಗಳ ಮೂಲ
ಒದಗಿಸುವಂತೆ ಶಿಫಾರ್ಸು ಮಾಡಿತು.

ವಾಣಿಜ್ಯ ಬ್ಯಾಂಕುಗಳು :

ಈ ಬ್ಯಾಂಕುಗಳು ನಗರಗಳಲ್ಲಿ ಮತ್ತು ಪಟ್ಟಣಗಳಲ್ಲಿ ಸ್ಥಾ
ವಾಗಿರುತ್ತವೆ. ಪ್ರಾರಂಭದಲ್ಲಿ ಇವು ಹೆಚ್ಚಾಗಿ ವಾಣಿಜ್ಯೋ
ದ್ಯಮಿಗಳಿಗೆ ಮಾತ್ರ ಸಾಲನೀಡಿ ಹೆಚ್ಚು ಲಾಭ ಪಡೆ
ತ್ತಿದ್ದವು. ರೈತರ ಬಳಿ ಯಾವ ಆಧಾರವೂ ಇಲ್ಲದ್ದರಿಂದಲ
ಅಲ್ಲದೆ ತೆಗೆದುಕೊಂಡಿರುವ ಹಣವನ್ನು ಮರುಪಾವತಿಮಾಡ
ಶಕ್ತಿಯನ್ನು ಹೊಂದಿಲ್ಲದಿರುವುದರಿಂದಲೂ ಈ ಬ್ಯಾಂಕುಗ
ರೈತರನ್ನು ಅಲಕ್ಷ್ಯಮನೋಭಾವದಿಂದ ಕಾಣುತ್ತಿದ್ದವು. ರೈ
ಸಾಲದಲ್ಲಿ ಶೇಕಡ 1ರಷ್ಟನ್ನು ಮಾತ್ರ ಈ ಬ್ಯಾಂಕುಗ
ಒದಗಿಸುತ್ತಿದ್ದವು. ಇದನ್ನು ನಿವಾರಿಸಿ ದೇಶದ ಆರ್ಥಿಕತೆ
ನಾನಾ ರಂಗಗಳಿಗೆ ಯೋಜಿತ ನೆರವು ನೀಡುವ ಉದ್ದೇಶದಿ
1969ರಲ್ಲಿ 14 ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಲ
ಯಿತು. ಇದರಿಂದಾಗಿ ರೈತರಿಗೆ ವಾಣಿಜ್ಯ ಬ್ಯಾಂಕುಗಳಿ
ಹೆಚ್ಚಿನಮಟ್ಟದ ಸಾಲ ದೊರೆಯುವಂತಾಯಿತು. ವಾಣಿ
ರಾಷ್ಟ್ರೀಕೃತ ಬ್ಯಾಂಕುಗಳು ರೈತರಿಗೆ ಟ್ರ್ಯಾಕ್ಟರ್‌ಗಳನ
ಕೊಳ್ಳಲು, ಪಂಪ್‌ಸೆಟ್‌ಗಳನ್ನು ಕೊಳ್ಳಲು ಸಾಲವನ್ನು ಕೊ
ಲಾರಂಭಿಸಿದವು. ಅಷ್ಟೇ ಅಲ್ಲದೆ ಈ ಬ್ಯಾಂಕುಗಳು ಚತು
ಪಂಚವಾರ್ಷಿಕ ಯೋಜನೆಯಲ್ಲಿ 200 ಕೋಟಿ ರೂ.ಗಳನ
ಕೃಷಿ ಕ್ಷೇತ್ರದ ಅಭಿವೃದ್ಧಿಗೆ ಕೊಡಲು ಮುಂದೆ ಬಂದಿವೆ. ಇ
ನಿಜಕ್ಕೂ ಅಭಿನಂದನೀಯ. ಇತ್ತೀಚೆಗೆ ರಾಷ್ಟ್ರೀಕೃತ ಬ್ಯಾಂ

ಗಳು ತಮ್ಮ ಶಾಖೆಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ತೆರೆಯು ತ್ತಿದ್ದು ರೈತರಿಗೆ ಸಾಲದ ಸೌಲಭ್ಯಗಳನ್ನು ನೀಡುತ್ತಿವೆ. 1972ರ ಡಿಸೆಂಬರ್ ಕೊನೆಯವೇಳೆಗೆ ಸುಮಾರು 6498 ಹೊಸ ಶಾಖೆ ಗಳು ತೆರೆಯಲ್ಪಟ್ಟಿವೆ. ಈ ಬ್ಯಾಂಕುಗಳು ಇಂದು ರಾಷ್ಟ್ರದ ನಾನಾ ಕ್ಷೇತ್ರಗಳಿಗೆ ಸಹಾಯ ಸಲ್ಲಿಸುವ ಧ್ಯೇಯವನ್ನಿಟ್ಟು ಕೊಂಡು ಅದರಂತೆ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಕೆಲಸ ನಿರ್ವಹಿಸುತ್ತಿವೆ.

ಹಳ್ಳಿಯ ಸಾಹುಕಾರರು:

ರೈತರು ಪಡೆಯುವ ಸಾಲದ ಮೂಲಗಳಲ್ಲೆಲ್ಲಾ ಹಳ್ಳಿಯ ಸಾಹುಕಾರರು ಮುಖ್ಯರಾದವರು. ತಮ್ಮ ಚಾಕಚಕ್ಯತೆಯಿಂದ, ಬುದ್ಧಿವಂತಿಕೆಯ ಮಾತುಗಾರಿಕೆಯಿಂದ ರೈತರನ್ನು ಮರಳು ಮಾಡಿ ಮೋಸಗೊಳಿಸುವುದರಲ್ಲಿ ಇವರು ಸಿದ್ಧಹಸ್ತರು. ಬಡ ರೈತರ ಸುಖಸಂತೋಷಗಳನ್ನು ಗಾಳಿಗೆ ತೂರಿ ಅವರ ಲಾಭ ಪಡೆ ಯುವುದರಲ್ಲಿ ನಿಪುಣರು. ಇವರು ಹಳ್ಳಿಯ ರೈತರ ಹಣದ ಜೀವಾಳ. ಸಾಹುಕಾರರ ಹಾಗೂ ರೈತರ ಸಂಬಂಧವು ಇಂದು ನಿನ್ನೆಯದಲ್ಲ. ಇವರ ಸಂಬಂಧವು ವಂಶಪಾರಂಪರ್ಯವಾಗಿ, ತಲೆ ತಲಾಂತರಗಳಿಂದ ಬಂದಿದೆ. 1950–51ರಲ್ಲಿ ಕೈಗೊಂಡ ಸಮೀಕ್ಷೆಯ ಪ್ರಕಾರ ಸಾಹುಕಾರರು ಒಟ್ಟು ಸಾಲದ ಶೇಕಡ 70ರಷ್ಟನ್ನು ಒದಗಿಸುತ್ತಿದ್ದರೆಂದು ತಿಳಿದುಬಂದಿದೆ. ಸರಕಾರವು ನಾನಾ ಬಗೆಯ ಸಾಲಗಳನ್ನು ಒದಗಿಸುತ್ತಿದ್ದಾಗ್ಯೂ ರೈತರು ಹಳ್ಳಿಯ ಸಾಹುಕಾರರ ಬಳಿಯಲ್ಲೇ ಹೆಚ್ಚು ಬಡ್ಡಿ ತೆತ್ತು ಸಾಲ ಪಡೆಯುತ್ತಾರೆ. ರೈತರಿಗೆ ಸಾಲ ನೀಡುವಿಕೆಯಲ್ಲಿ ಹಳ್ಳಿಯ ಸಾಹುಕಾರರ ಪ್ರಾಬಲ್ಯತೆ ಇಷ್ಟರಮಟ್ಟಿಗಿರಲು ಅನೇಕ ಕಾರಣ ಗಳಿವೆ.

1. ಸರಕಾರವು ರೈತರಿಗೆ ನೀಡುವ ತಕಾವಿ ಸಾಲವು ಸಕಾ ದಲ್ಲಿ ದೊರೆಯದಿರುವುದು.

2. ಸಾಹುಕಾರಿ ವ್ಯವಹಾರವು ಭಾರತದ ಗ್ರಾಮಾಂತ ಅರ್ಥವ್ಯವಸ್ಥೆಯಲ್ಲಿ ಹಿಂದಿನಿಂದಲೂ ಅಸ್ತಿತ್ವದಲ್ಲಿರುವುದು.

3. ಸಾಹುಕಾರರು ರೈತರಿಗೆ ಅನುತ್ಪಾದಕ ವೆಚ್ಚಗಳಿ ಸಾಲ ಕೊಡುವುದು ಇವೇ ಮುಂತಾದುವು.

ಸರಕಾರವಾಗಲೀ, ಬ್ಯಾಂಕುಗಳಾಗಲೀ, ಸಹಕಾರ ಸಂಸ ಗಳಾಗಲೀ ರೈತರಿಗೆ ಅನುತ್ಪಾದಕ ವೆಚ್ಚಗಳಿಗೆ ಸಾಲ ಕೊಡುವ ದಿಲ್ಲವೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ಖಾಸಗೀ ಸಾಹ ಕಾರರಾದರೆ ರೈತರ ಮನೆಯಲ್ಲಿ ನಡೆಯುವ ಮುಂಜಿ, ನಾಮ ಕರಣ, ಮದುವೆ ಮತ್ತು ಹಬ್ಬಹರಿದಿನಗಳ ವೆಚ್ಚಕ್ಕೆ ಸಾ ವನ್ನು ಕೊಡುತ್ತಾರೆ. ಸಾಮಾನ್ಯವಾಗಿ ಸಾಹುಕಾರರು ರೈ ರಿರುವ ಗ್ರಾಮಗಳಲ್ಲೀ ವಾಸಿಸುವುದರಿಂದ ಅವರಿಗೆ ಪ್ರತಿಯೊಬ ರೈತನ ವಿಷಯವೂ ಚೆನ್ನಾಗಿ ತಿಳಿದಿರುತ್ತದೆ. ತಮ್ಮ ಬಳಿ ಸಾ ವನ್ನು ಪಡೆದಿರುವ ರೈತನ ಆರ್ಥಿಕಶಕ್ತಿ ಎಷ್ಟಿದೆ, ಅವನು ಅದನ ಯಾವಾಗ ಹಿಂತಿರುಗಿಸಬಲ್ಲನು, ತಾವು ಸಾಲವನ್ನು ಯಾವ ರೂ ದಲ್ಲಿ ಪಡೆಯಬಹುದು ಎಂಬ ವಿಷಯಗಳು ಗೊತ್ತಿರುವುದರಿಂ ಯಾವ ತಕರಾರನ್ನೂ ಮಾಡದೆ ರೈತರಿಗೆ ಯಾವ ಸಮಯದ ಬಂದರೂ ಸಾಲವನ್ನು ಕೊಡುತ್ತಾರೆ. ಅಲ್ಲದೆ, ಕಾಗದ ಪತ್ರ ಗಳನ್ನು ಸ್ವಲ್ಪಕಾಲದನಂತರ ಮಾಡಿಕೊಳ್ಳುತ್ತಾರೆ. ಹೀ ಅನೇಕ ಕಾರಣಗಳಿಂದ ಸಾಹುಕಾರರು ರೈತರನ್ನು ತಮ್ಮ ವಲಯ ದಲ್ಲಿ ಕಟ್ಟಿಹಾಕಿಬಿಟ್ಟಿದ್ದಾರೆ. ರೈತ ಒಮ್ಮೆ ಸಾಹುಕಾರರ ವಿ ಚಕ್ರದಲ್ಲಿ ಸಿಕ್ಕಿಹಾಕಿಕೊಂಡುಬಿಟ್ಟರೆ ತೀರಿತು. ಅವನಿಗೆ ಬಿಡ ಗಡೆ ಸಿಗುವುದು ಅವನ ಮರಣಾನಂತರವೇ. 1960ರಿಂದೀಚೆ

ಸಹಕಾರ ಸಂಸ್ಥೆಗಳ ಕಾರ್ಯತತ್ಪರತೆಯಿಂದಾಗಿ ಸಾಹುಕಾರರ ಪ್ರಾಬಲ್ಯತೆ ಕಡಿಮೆಯಾಗುತ್ತಿದ್ದು ಒಟ್ಟು ಸಾಲದ ಶೇಕಡ 49 ರಷ್ಟನ್ನು ಮಾತ್ರ ರೈತರಿಗೆ ಒದಗಿಸುತ್ತಿದ್ದಾರೆಂದು ತಿಳಿದು ಬಂದಿದೆ. ಇದು ನಿಜಕ್ಕೂ ಸಂತಸದ ಸಂಗತಿ.

**ಸಹಕಾರ ಸಂಸ್ಥೆಗಳು :**

ಸಹಕಾರ ಸಂಸ್ಥೆಗಳು ರೈತರಿಗೆ ಸಾಲ ನೀಡುವಿಕೆಯಲ್ಲಿ ಗಣನೀಯಪಾತ್ರವನ್ನು ವಹಿಸುತ್ತಿವೆ. ಈ ಸಂಸ್ಥೆಗಳಿಂದ ರೈತರು ಶೇಕಡ 3.1ರಷ್ಟು ಸಾಲವನ್ನು ಪಡೆಯುತ್ತಾರೆಂದು ತಿಳಿದು ಬಂದಿದೆ. ಇಲ್ಲಿ ಬಡ್ಡಿಯುದರ ಶೇಕಡ 7ರಿಂದ 12ರವರೆಗೆ ಇರುತ್ತದೆ. ಇತ್ತೀಚೆಗೆ ಮೊದಲಿಗಿಂತಲೂ ಸಹಕಾರ ಸಂಸ್ಥೆಗಳಿಂದ ಸಿಗುವ ಸಾಲ ಹೆಚ್ಚುತ್ತಿದೆ. ರೈತರ ಸಾಲದ ಮೂಲಗಳು ಅನೇಕವಿದ್ದರೂ ಇಂದು ಹೆಚ್ಚು ಜನಪ್ರಿಯವಾಗಿರುವುದು ಸಹಕಾರ ಸಂಸ್ಥೆಗಳು. ಈ ಸಂಸ್ಥೆಗಳ ಮೂಲಕ ದೊರೆಯುವ ಸಾಲವು ಅತ್ಯುತ್ತಮವೆಂದು ತಿಳಿದುಬಂದಿದೆ. ರಿಜರ್ವ್ ಬ್ಯಾಂಕ್ ಇತ್ತೀಚೆಗೆ ಕೃಷಿ ಸಾಲಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ನಿವಾರಿಸಲು ಕೃಷಿ ಸಾಲದ ವಿಭಾಗವನ್ನು ರಚಿಸಿದೆ. ಈ ಇಲಾಖೆಯು ರಾಜ್ಯ ಸಹಕಾರಿ ಸಂಸ್ಥೆಗಳ ಮೂಲಕ ಸಾಗುವಳಿಗೆ ಬೇಕಾಗುವ ಸಾಲಗಳನ್ನು ಒದಗಿಸುವುದು.

ಮೇಲಿನ ಎಲ್ಲಾ ಸಾಲದ ಮೂಲಗಳು ಸರಕಾರದ ಆಡಳಿತ ಯಂತ್ರದ ಮೇಲೆ ನಿಂತಿರುವುವು. ಈ ಯಂತ್ರದಲ್ಲಿ ಅನೇಕ ವಿಭಾಗಗಳು ರೂಪುಗೊಂಡು, ದೊಡ್ಡ ಅಧಿಕಾರಿಗಳಿಂದ ಕಾರ್ಯರೂಪಕ್ಕೆ ಬರುತ್ತವೆ. ಈ ಅಧಿಕಾರಿಗಳು ಸರಕಾರದ ನಿಯಮಗಳನ್ನು ಅನುಸರಿಸಬೇಕು. ನಮ್ಮ ದೇಶದಲ್ಲಿ ಸಾಲದ ಮೂಲಗಳು ಎಷ್ಟಿದ್ದರೂ ರೈತರ ಬಡತನ ಮಾತ್ರ ದಿನೇ ದಿನೇ ಹೆಚ್ಚು

ತ್ತಿದೆ. ಇದರ ನಿವಾರಣೆಯಾಗಿ ಕೃಷಿಯ ಉತ್ಪನ್ನ ಹೆಚ
ಬೇಕಾದರೆ ಸಹಕಾರ ಸಂಸ್ಥೆಗಳು ರೈತರಿಗೆ ಅಗತ್ಯವಾಗಿ ಬೇಕಾ
ಹಣದ ಸಹಾಯವನ್ನು ಸಕಾಲದಲ್ಲಿ ಒದಗಿಸಬೇಕು. ರೈ
ರೊಡನೆ ಪ್ರೀತಿ, ಸೌಹಾರ್ದತೆಗಳಿಂದ, ಮಾನವೀಯ ಭಾವ
ಗಳಿಂದ ನಡೆದುಕೊಳ್ಳಬೇಕು. ಇದಕ್ಕಾಗಿ ಸಹಕಾರ ಸಂಸ್ಥೆಗ
ಒಮ್ಮನಸ್ಸಿನಿಂದ ಶ್ರಮವಹಿಸಿ ದುಡಿಯಬೇಕು. ಈ ದಿಸೆಯ
ಸಹಕಾರ ಸಂಸ್ಥೆಗಳು ಅನೇಕ ಬಗೆಗಳಲ್ಲಿ ರೂಪುಗೊಂಡು ಸಾ
ನೀಡುವಿಕೆಯಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಿದ್ದ
ಕೃಷಿಯ ಅಧಿಕ ಉತ್ಪನ್ನಕ್ಕೆ ಸಹಕಾರಿಯಾಗಿವೆ.

## ಸಾಹುಕಾರರ ನಾಶನ–ಸಹಕಾರಕ್ಕೆ ಆಹ್ವಾನ

ಬಡ ರೈತರ ಹಾದಿಯಲ್ಲಿ ಮುಳ್ಳಾಗಿ ನಿಂತಿರುವ ಸಮಾ
ದ್ರೋಹಿಗಳಾದ ಸಾಹುಕಾರರ ನಾಶನ ಮಾಡುವುದಕ್ಕಾಗಿಯೆ
ಭಾರತದಲ್ಲಿ ಸಹಕಾರ ಪದ್ಧತಿಯು ರೂಪುಗೊಂಡಿದೆ. ಇದರಿಂದಾ
ಸಾಹುಕಾರರ ಶೋಷಣೆಯನ್ನು ತಡೆಗಟ್ಟುವಂತಾಗಿದೆ. ಸಾಹ
ಕಾರರ ಕಪಿಮುಷ್ಟಿಯಲ್ಲಿ ಸಿಲುಕಿ ತೊಳಲುತ್ತಿರುವ ರೈತರನ
ಬಿಡಿಸಲೆಂದೇ ನಮ್ಮ ದೇಶದಲ್ಲಿ 19ನೆಯ ಶತಮಾನದ ಅಂತ್ಯದ
ಸಹಕಾರಕ್ಕೆ ಆಹ್ವಾನ ನೀಡಲಾಯಿತು. ರೈತರಲ್ಲಿ, ಕಾರ್ಮಿಕರ
ಹಾಗೂ ಅಲ್ಪ ಆದಾಯ ಉಳ್ಳವರಲ್ಲಿ ಮಿತವ್ಯಯ, ಸ್ವಸಹಾ
ಮತ್ತು ಸಹಕಾರ ಮನೋಭಾವವನ್ನು ಮೂಡಿಸುವುದೇ ಇದ
ಧ್ಯೇಯವಾಗಿತ್ತು. ಇಂದು ಸಹಕಾರಕ್ಕೆ ನಮ್ಮ ರಾಷ್ಟ್ರದ
ಹೆಚ್ಚಿನ ಪ್ರಾಮುಖ್ಯತೆ ದೊರೆತಿದೆ. ರಾಷ್ಟ್ರದ ಆರ್ಥಿಕ ಅಭಿವೃದ್ಧಿ
ಸಹಕಾರ ಪದ್ಧತಿಯಿಂದಾಗುವ ಪ್ರಯೋಜನಗಳನ್ನು ಅರಿತಿರು
ಸರಕಾರವು ತ್ವರಿತಗತಿಯಲ್ಲಿ ಸಹಕಾರದ ಮೂಲಾಧಾರದ ಮೇ

ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದೆ. ಆರ್ಥಿಕ ಅಭಿವೃದ್ಧಿ ಕಾರ್ಯಗಳಲ್ಲಿ ಜನತೆಯ ಜಾಣ್ಮೆ ಮತ್ತು ಸಾಮರ್ಥ್ಯ ಗಳನ್ನು ಶೇಖರಿಸಲು ಸಹಕಾರವು ಒಂದು ಉತ್ತಮ ಸಾಧನ ವಾಗಿದೆ. ಸಮಾಜವಾದಿ ಸಮಾಜವನ್ನು ನಿರ್ಮಿಸಲು ಸಹಕಾರ ದಂತಹ ಉತ್ತಮಸಾಧನ ಬೇರೊಂದಿಲ್ಲ. ಸಹಕಾರವು ಸಾಮಾಜಿಕ ನ್ಯಾಯವನ್ನು ಪ್ರೋತ್ಸಾಹಿಸುತ್ತದೆ. ರಾಷ್ಟ್ರದ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸಾಮಾನ್ಯವ್ಯಕ್ತಿಯೂ ಪಾಲ್ಗೊಳ್ಳಲು ಅದು ಅವಕಾಶವನ್ನು ಒದಗಿಸುತ್ತದೆ. ಮನುಷ್ಯ ಪ್ರಪಂಚಕ್ಕೆ ಬರುವಾಗ ಒಂಟಿಯಾಗಿ ಬರುತ್ತಾನೆ. ಪ್ರಪಂಚದಿಂದ ಹೋಗುವಾಗಲೂ ಒಂಟಿಯಾಗಿಯೇ ಹೋಗುತ್ತಾನೆ. ಆದರೆ ಪ್ರಪಂಚದಲ್ಲಿ ಇರುವ ವರೆಗೆ ಅವನು ಒಂಟಿಯಾಗಿ ಎಂದಿಗೂ ಜೀವಿಸಲಾರ. ಮನುಷ್ಯ ಸಂಘಜೀವಿ. ತಾನು, ತನ್ನವರು, ಆಪತ್ತಿನಲ್ಲಿ ನೆರವು, ಸಂತೋಷ ಗಳಲ್ಲಿ ಪಾಲು ಇವು ಅವನ ಸಹಜಗುಣಗಳಾಗಿವೆ. ನಮ್ಮದು ಸಮಾಜವಾದಿ ಪ್ರಜಾಪ್ರಭುತ್ವವಾಗಿದೆ. 'ಸರ್ವೇಜನಾಃ ಸುಖಿನೋ ಭವಂತು' ಎಂಬುದೇ ನಮ್ಮ ಮಂತ್ರವಾಗಿದೆ. ಸಹಕಾರ, ಸಹಬಾಳ್ವೆ, ಸಮರಸವೇ ಜೀವನ ಎಂಬುವನ್ನು ಭಾರತೀಯರು ಮರೆಯುವಂತೆಯೇ ಇಲ್ಲ. ಸ್ವತಂತ್ರ ಸಮಾನತೆ ಮತ್ತು ಸೋದರತೆ, ಇವೆರಡೂ ಪ್ರಜಾಪ್ರಭುತ್ವದ ಅಡಿಗಲ್ಲಾಗಿವೆ, ಹಾಗೂ ಸಹಕಾರದ ಇನ್ನೊಂದು ಮುಖವಾಗಿದೆ. ಆದುದ ರಿಂದಲೇ ಧನಪಿಶಾಚಿಗಳಂತಿರುವ ಸಾಹುಕಾರರ ಪ್ರಲೋಭನೆ ಯಿಂದ, ಕ್ರೂರ ಹಿಡಿತದಿಂದ ರೈತರನ್ನು ಬಿಡಿಸಿ, ಅವರ ಸಾಲದ ಹೊರೆಯನ್ನು ಕಡಿಮೆ ಮಾಡಿ ಕೃಷಿ ಉತ್ಪನ್ನವನ್ನು ಹೆಚ್ಚಿಸುವ ಉದ್ದೇಶದಿಂದಲೇ ಭಾರತದಲ್ಲಿ ಸಹಕಾರ ಪದ್ಧತಿಯನ್ನು ಅನುಷ್ಠಾನಕ್ಕೆ ತರಲಾಯಿತು. ಸಹಕಾರವು ಪ್ರಜಾಪ್ರಭುತ್ವದ

ಜೀವಾಳವಾಗಿದೆ. ಇಲ್ಲಿಯ ಪ್ರತಿಯೊಂದು ಕೆಲಸವನ್ನೂ ಸಹಕಾ
ಪದ್ಧತಿಯಲ್ಲಿ ನಡೆಸಿದರೆ ಪ್ರಜಾಪ್ರಭುತ್ವವು ಯಶಸ್ವಿಯಾಗು
ವುದರಲ್ಲಿ ಸಂದೇಹವಿಲ್ಲ. ಇದು ಸಾಧ್ಯವಾಗಬೇಕಾದರೆ ಸಹಕಾ
ಕಾರ್ಯಗಳು ರೈತರ ಜೀವನದಲ್ಲಿ ಹಾಸುಹೊಕ್ಕಾಗಬೇಕು.
ರೈತರು ತಮ್ಮ ಉದ್ಧಾರಕ್ಕಾಗಿಯೇ ಸ್ಥಾಪಿತವಾಗಿರುವ ಸಹಕಾ
ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ್ದು, ಒಟ್ಟಿ
ಕಲೆತು ಅನ್ಯೋನ್ಯತೆಯಿಂದ ಕೆಲಸ ಮಾಡಬೇಕು.

## ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಸಹಕಾರಿ ಸಂಸ್ಥೆಗಳ ರೂಪ ವೈವಿಧ್ಯ

ಇಂದಿನ ಸ್ವತಂತ್ರ ನವಭಾರತದಲ್ಲಿ ಸಹಕಾರ ಕ್ಷೇತ್ರದ ಕಾರ್ಯ
ವ್ಯಾಪ್ತಿಯು ದಿನೇದಿನೇ ವಿಸ್ತಾರವಾಗುತ್ತಿದೆ. ಸಹಕಾರಿ ಕ್ಷೇತ್ರದಲ್ಲಿ
ಉಂಟಾದ ಪ್ರಗತಿಯಿಂದಾಗಿ ಇತರ ಕ್ಷೇತ್ರಗಳಿಗೂ ಸಹಕಾರವು
ಹಬ್ಬುತ್ತಿದೆ. ಮೊದಲಿಗೆ ಸಾಲ ಕೊಡುವುದು ಮಾತ್ರ ಸಹಕಾ
ಸಂಸ್ಥೆಗಳ ಕೆಲಸವೆಂದು ತಿಳಿಯಲಾಗಿತ್ತು. ಇತರ ಕ್ಷೇತ್ರಗಳಲ್ಲಿ
ಸಹಕಾರಕ್ಕೆ ಹೆಚ್ಚು ಅವಕಾಶವಿರಲಿಲ್ಲ. ಆದರೆ ಈಗ ಗೃಹ
ನಿರ್ಮಾಣ, ದಿನಬಳಕೆಯ ವಸ್ತುಗಳ ಸಂಗ್ರಹಣೆ, ಮಾರಾಟ
ಸಹಕಾರಿ ನೀರಾವರಿ, ನೇಕಾರರ ಸಹಕಾರಿ ಸಂಸ್ಥೆ, ಎನ್.ಸಿ.ಸಿ
ಸಹಕಾರ ಸಂಸ್ಥೆ, ಸಹಕಾರಿ ಮುದ್ರಣಾಲಯ, ಹಾಲು ಪೂರೈಕೆ
ಸಹಕಾರಿ ಸಂಸ್ಥೆ, ಮೀನುಗಾರರ ಸಂಸ್ಥೆ ಇತ್ಯಾದಿ ಸಂಸ್ಥೆಗಳ
ಸಹಕಾರದ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿವೆ
ನಮ್ಮ ದೇಶದಲ್ಲಿ ಸಹಕಾರದ ಬೆಳವಣಿಗೆಯು ಹೀಗೆ ನಾನಾ ರೂಪ
ಗಳನ್ನು ತಾಳಿವೆ. ಹಲವು ಸಂಸ್ಥೆಗಳು ಕೃಷಿಸಾಲ ಒದಗಿಸಲು
ಮತ್ತೆ ಕೆಲವು ಭೂ ಸಾಗುವಳಿ ನಿರ್ವಹಿಸಲು, ಇನ್ನು ಕೆಲವು

ಮಾರಾಟ ನಿರ್ವಹಿಸಲು ಸಂಘಟಿಸಲ್ಪಟ್ಟಿವೆ. ಇವುಗಳಲ್ಲದೆ ಕೆಲವು ಕೃಷಿಯೇತರ ಸಾಲನೀಡುವ ಸಂಸ್ಥೆಗಳನ್ನೂ, ಮತ್ತೆ ಕೆಲವು ಸಾಲನೀಡದ ಸಹಕಾರ ಸಂಸ್ಥೆಗಳನ್ನೂ ಕಾಣಬಹುದು. ಸಂಸ್ಥೆಗಳನ್ನು ಅವು ಕೈಗೊಂಡಿರುವ ಕಾರ್ಯಗಳನ್ವಯ ಏಕೋದ್ದೇಶ ಹಾಗೂ ವಿವಿಧೋದ್ದೇಶ ಸಹಕಾರ ಸಂಸ್ಥೆಗಳೆಂದು ವಿಂಗಡಿಸಬಹುದು.

ಇಂದು ಕೃಷಿಯು ವಿವಿಧೋದ್ದೇಶಗಳಿಗಾಗಿ ರೈತರಿಗೆ ಸುಲಭ ದರದಲ್ಲಿ ಆರ್ಥಿಕ ನೆರವನ್ನು ಒದಗಿಸುವ ಧ್ಯೇಯದಿಂದ ಕೃಷಿ ಸಹಕಾರ ಸಾಲ ಪದ್ಧತಿಯು ಜಾರಿಗೆ ಬಂದಿದೆ. ಸಹಕಾರ ಸಂಸ್ಥೆಯು ಆರ್ಥಿಕ ವ್ಯವಸ್ಥೆಯ ಒಂದು ಮುಖ್ಯ ಅಂಗವಾಗಿದೆ. ಇಂದು ಸಹಕಾರ ಸಂಸ್ಥೆಗಳ ಜೊತೆಗೆ ಹಲವಾರು ಬ್ಯಾಂಕುಗಳು ಸಹಕಾರದ ತಳಹದಿಯ ಮೇಲೆ ಸಂಘಟಿಸಲ್ಪಟ್ಟಿವೆ. ಅವುಗಳಲ್ಲಿ ಈ ಕೆಲವನ್ನು ಉಲ್ಲೇಖಿಸಬಹುದು. ಮಧ್ಯವರ್ತಿ ಬ್ಯಾಂಕು, ಪ್ರಾಂತೀಯ ಬ್ಯಾಂಕು, ಭೂ ಅಭಿವೃದ್ಧಿ ಬ್ಯಾಂಕು ಇತ್ಯಾದಿ. ಈ ಬ್ಯಾಂಕುಗಳು ವಿವಿಧ ಬಗೆಯ ಸಾಲಗಳನ್ನು ರೈತರಿಗೆ ನೀಡುತ್ತವೆ. ಇವುಗಳ ಮುಖ್ಯ ಗುರಿ ಸಹಕಾರವು ಜನರ ಜೀವನದ ಸಂಜೀವಿನಿಯಾಗಬೇಕೆಂಬುದು. ಈ ದಿಸೆಯಲ್ಲಿ ಸಹಕಾರವು ದಿಟ್ಟ ಹೆಜ್ಜೆಯನ್ನಿಟ್ಟಿದೆ ಎಂದು ಹೇಳಬಹುದು.

**ಸಹಕಾರ ಸಂಸ್ಥೆಗಳ ರೂಪ ವೈವಿಧ್ಯ :**

ಸಹಕಾರ ಸಂಸ್ಥೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು—

(1) ಸಾಲ ನೀಡುವ ಸಹಕಾರ ಸಂಸ್ಥೆಗಳು.

(2) ಸಹಕಾರಿ ಸಾಗುವಳಿ ಸಂಸ್ಥೆಗಳು.

(3) ಸಹಕಾರಿ ಮಾರಾಟ ಸಂಸ್ಥೆಗಳು.

ಸಾಲ ನೀಡುವ ಸಹಕಾರಿ ಸಂಸ್ಥೆಗಳು :

ಕೃಷಿ ವ್ಯವಸ್ಥೆಯಲ್ಲಿ ಸಾಲ ಕೊಡುವ ಸಹಕಾರ ಸಂಸ್ಥೆಗಳ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿವೆ. ರಾಷ್ಟ್ರವು ಪ್ರಗತಿ ಹೊಂದಿ ಆಹಾರಧಾನ್ಯಗಳ ಬಗ್ಗೆ ಸ್ವಾವಲಂಬನೆಯನ್ನು ಸಾಧಿಸ ಬೇಕಾದರೆ ಕೃಷಿಯು ಅಭಿವೃದ್ಧಿಯಾಗಬೇಕಾದುದು ಅಗತ್ಯ. ಕೃಷಿಯು ಅಭಿವೃದ್ಧಿಯಾಗದ ಹೊರತು ನಾಡಿನ ಅಭ್ಯುದಯ ವಾಗಲಾರದು. ಕೃಷಿಯು ಅಭಿವೃದ್ಧಿಯು ರೈತರನ್ನು ಅವಲಂಬಿ ಸಿದೆ. ಉತ್ಪನ್ನವನ್ನು ಹೆಚ್ಚಿಸಲು ರೈತರು ಅಧಿಕ ಇಳುವರಿ ಬಿತ್ತನೆ ಬೀಜಗಳ ಬಳಕೆ, ರಸಾಯನಿಕ ಗೊಬ್ಬರಗಳು, ಕ್ರಿಮಿ ನಾಶಕಗಳು, ನವೀನ ಯಂತ್ರೋಪಕರಣಗಳು ಹಾಗೂ ನೀರಾ ವರಿಯ ಸೌಕರ್ಯಗಳನ್ನು ಬಳಸಬೇಕಾಗುತ್ತದೆ. ಇದಕ್ಕೆಲ್ಲಾ ಹೆಚ್ಚು ಹಣ ಬೇಕಾಗುತ್ತದೆ. ಆದರೆ ಭಾರತದ ರೈತರು ಬಡವ ರಾಗಿರುವುದರಿಂದ ಇವುಗಳಿಗೆಲ್ಲಾ ವ್ಯಯ ಮಾಡಲು ಅವರ ಬಳಿ ಹಣವಿರುವುದಿಲ್ಲ. ಆದ್ದರಿಂದ ರೈತರಿಗೆ ಕೃಷಿಯ ಉತ್ಪನ್ನವನ್ನು ಹೆಚ್ಚಿಸಲು ಅಗತ್ಯವಾದ ಸಾಲದ ಸೌಲಭ್ಯವನ್ನು ಒದಗಿಸಲು ಕೃಷಿ ಸಾಲ ಸಹಕಾರ ಸಂಸ್ಥೆಗಳು ರೂಪುಗೊಂಡಿವೆ. ರೈತರ ಸಮಸ್ಯೆಗಳನ್ನು ದೂರಮಾಡುವಲ್ಲಿ ಈ ಸಂಸ್ಥೆಗಳು ವಿಶಿಷ್ಟಪಾತ್ರ ವನ್ನು ವಹಿಸುತ್ತಿವೆ. ರೈತರಿಗೆ ಉತ್ತಮ ಬೀಜಗಳನ್ನು, ಗೊಬ್ಬರ ಗಳನ್ನು ಕೊಂಡುಕೊಳ್ಳಲು ಸಾಲವನ್ನು ಕಡಿಮೆದರದ ಬಡ್ಡಿಗೆ ಸಕಾಲದಲ್ಲಿ ಒದಗಿಸುವುದರೊಂದಿಗೆ ರೈತರ ಕಡೆ ಹೆಚ್ಚು ಗಮನ ಹರಿಸಿವೆ. ನ್ಯಾಯಸಮ್ಮತವಾದ ದರದಲ್ಲಿ ಸದಸ್ಯರಿಗೆ ಸಾಲ ಒದಗಿಸುವುದು ಹಾಗೂ ಸದಸ್ಯರಲ್ಲಿ ಮಿತವ್ಯಯದ ಪ್ರವೃತ್ತಿ ಯನ್ನು ಬೆಳೆಸುವುದೇ ಈ ಸಂಸ್ಥೆಗಳ ಮುಖ್ಯ ಉದ್ದೇಶವಾಗಿದೆ. ಈ ಸಂಸ್ಥೆಗಳ ಮೂಲಕ ಹಳ್ಳಿಯ ರೈತರನ್ನು ಸಾಲಕೊಡುವ

ಸಾಹುಕಾರರ ಹಿಡಿತದಿಂದ ತಪ್ಪಿಸಿ ರೈತರ ಹಣಕಾಸಿನ ಪರಿಸ್ಥಿತಿಯನ್ನು ಉತ್ತಮಪಡಿಸುವುದೇ ನಮ್ಮ ಗ್ರಾಮಾಂತರ ಚಳುವಳಿಯ ಮುಖ್ಯ ಗುರಿಯಾಗಿದೆ. ಈ ದೃಷ್ಟಿಯಿಂದ ಸಾಲ ಒದಗಿಸುವ ಸಹಕಾರ ಸಂಸ್ಥೆಗಳು ರೈತರ ಏಳಿಗೆಗೆ ಶ್ರಮವಹಿಸಿ ದುಡಿಯುತ್ತಿವೆ. ಅವರಲ್ಲಿ ಸಹಕಾರದ ಮನೋಭಾವವನ್ನು ಸೃಷ್ಟಿಸಿ ಅವರನ್ನು ಪ್ರೋತ್ಸಾಹಿಸುತ್ತಿವೆ; ರೈತರ ಸಮಸ್ಯೆಗಳನ್ನು ತಕ್ಕಮಟ್ಟಿಗೆ ದೂರ ಮಾಡಿವೆ. ರೈತರಲ್ಲಿ ನಿಜವಾದ ಅರಿವು ಮೂಡಿ ತಾವು ಬಾಳಿ ಬೆಳೆಯುವ ವಿಷಯದಲ್ಲಿ ಅವರಲ್ಲಿ ಆಸಕ್ತಿಯನ್ನು ಕುದುರಿಸಲು ಈ ಸಂಸ್ಥೆಗಳ ನಿರಂತರ ಶ್ರಮ ಅಗತ್ಯ ಹಾಗೂ ಅನಿವಾರ್ಯವೂ ಆಗಿದೆ.

ಕೃಷಿ ಸಹಕಾರಿ ಸಾಲವನ್ನು ಮೂರು ಬಗೆಯಾಗಿ ವಿಂಗಡಿಸಬಹುದು. (ಅ) ಅಲ್ಪಾವಧಿ ಸಾಲ. (ಆ) ಮಧ್ಯಮಾವಧಿ ಸಾಲ. (ಇ) ದೀರ್ಘಾವಧಿ ಸಾಲ.

**ಅಲ್ಪಾವಧಿ ಸಾಲ:**

ರೈತರಿಗೆ ಕೃಷಿಯ ಸಾಗುವಳಿಗಾಗಿ, ತಮ್ಮ ಭೂಮಿಯನ್ನು ಹದ ಮಾಡಲು, ರಸಾಯನಿಕ ಗೊಬ್ಬರ ಮತ್ತು ಉತ್ತಮ ಬೀಜಗಳನ್ನು ಕೊಳ್ಳಲು, ಕೂಲಿ ಕೊಡಲು ಅಲ್ಪಾವಧಿ ಸಾಲವು ಬೇಕಾಗುತ್ತದೆ. ಮುಂಗಾರು ಮತ್ತು ಹಿಂಗಾರು ಮಳೆಯ ಸಮಯದಲ್ಲಿ ಕೃಷಿ ಕಾರ್ಯಗಳನ್ನು ಕೈಗೊಳ್ಳಲು ನಗದು, ಹಾಗೂ ವಸ್ತುಗಳ ರೂಪದಲ್ಲಿ ರೈತರಿಗೆ ಬೇಕಾದ ಸಾಲವನ್ನು ಒದಗಿಸುವುದೇ ಅಲ್ಪಾವಧಿ ಸಾಲದ ಮುಖ್ಯ ಉದ್ದೇಶ. ಸಾಲ ಮರುಪಾವತಿಯ ಅವಧಿ 11 ತಿಂಗಳಿದ್ದು ಭೂ ಮಾಲೀಕನಾದ ರೈತನಿಗೆ 2000 ರೂ. ಸಾಲ ದೊರೆಯುತ್ತದೆ. ಸಹಕಾರಿ ಸಂಘಗಳ ಅಸಿಸ್ಟೆಂಟ್ ರಿಜಿಸ್ಟ್ರಾರರ ಅನುಮತಿ ಪಡೆದರೆ ಇನ್ನೂ

ಹೆಚ್ಚು ಸಾಲ ಪಡೆಯಬಹುದು. ನೀರಾವರಿ ಪ್ರದೇಶಗಳಲ್ಲಿ 10,000 ರೂ.ಗಳವರೆಗೂ, ನೀರಾವರಿ ಸೌಕರ್ಯಗಳಿಲ್ಲದ ಪ್ರದೇಶಗಳಲ್ಲಿ 5000 ರೂ.ಗಳವರೆಗೂ ಸಾಲವನ್ನು ಹೆಚ್ಚಿಸುವ ಸಾಧ್ಯತೆ ಇದೆ. ಹಳ್ಳಿಯಲ್ಲಿರುವ ಪ್ರಾಥಮಿಕ ಸಹಕಾರ ಸಂಸ್ಥೆಗಳು ಅಥವಾ ಸೇವಾ ಸಹಕಾರಿ ಸಂಸ್ಥೆಗಳಿಂದ ಈ ಬಗೆಯ ಸಾಲವನ್ನು ರೈತರು ಪಡೆಯಬಹುದು. ಈ ಸಾಲವನ್ನು ಪ್ರತಿ ಎಕರೆಗೆ, ಪ್ರತಿ ಬೆಳೆಗೆ ಗೊತ್ತುಪಡಿಸಿದ ಪ್ರಮಾಣದಲ್ಲಿ ಕೊಡಲಾಗುವುದು. ಮೊದಲಿಗೆ ಈ ಸಾಲವು ಭೂಮಿಯನ್ನು ಹೊಂದಿರುವ ರೈತರಿಗೆ ಮಾತ್ರ ಸಿಗುತ್ತಿತ್ತು. ಇತ್ತೀಚೆಗೆ ಗೇಣಿದಾರರಿಗೂ ಸಾಲ ಕೊಡಲಾಗುತ್ತಿವೆ. ಆದರೆ ಭದ್ರತೆಗಾಗಿ ಗೇಣಿದಾರನು ಜಾಮೀನು ಕೊಡಬೇಕಾಗುತ್ತದೆ.

**ಮಧ್ಯಮಾವಧಿ ಸಾಲ :**

ಕೇವಲ ಭೂಮಿಯಿದ್ದಮಾತ್ರಕ್ಕೆ ಸಾಗುವಳಿ ಮಾಡಲು ಸಾಧ್ಯವಿಲ್ಲ. ಸಾಗುವಳಿ ಮಾಡಬೇಕಾದರೆ ಗೊಬ್ಬರ, ಬೀಜಗಳು, ಎತ್ತುಗಳು ಬೇಕು. ಬಾವಿಯಲ್ಲಿರುವ ನೀರನ್ನು ಹಾಯಿಸಲು ಪಂಪ್‌ಸೆಟ್‌ನ ಸೌಲಭ್ಯ ಬೇಕು. ಹೀಗೆ ಕೃಷಿ ಸಾಗುವಳಿಗಾಗಿ ಬೆಲೆಬಾಳುವ ಉಪಕರಣಗಳನ್ನು ಕೊಳ್ಳಲು, ಬಾವಿಗಳಿಗೆ ಪಂಪ್ ಹಾಕಿಸಲು, ದನಗಳ ಕೊಟ್ಟಿಗೆಗಳನ್ನು ನಿರ್ಮಿಸಲು, ಎತ್ತುಗಳನ್ನು ಕೊಳ್ಳಲು, ಇವೇ ಮುಂತಾದ ಕಾರ್ಯಗಳಿಗೆ ಮಧ್ಯಮಾವಧಿ ಸಾಲವನ್ನು ರೈತರಿಗೆ ಒದಗಿಸಲಾಗುತ್ತದೆ. ಈ ಸಾಲದ ಅವಧಿಯು ಅಲ್ಪಾವಧಿ ಸಾಲಕ್ಕಿಂತಲೂ ಹೆಚ್ಚಿರುತ್ತದೆ. 15 ತಿಂಗಳಿನಿಂದ 5 ವರ್ಷಗಳ ಅವಧಿಯಲ್ಲಿ ರೈತರು ಸಾಲದ ಮರುಪಾವತಿಯನ್ನು ಮಾಡಬಹುದು. ಇದರ ಬಗ್ಗೆ ಹೇಳುವುದಾದರೆ ಪ್ರತಿ ಎಕರೆಯಲ್ಲಿನ ಉತ್ಪಾದನೆಯ $\frac{1}{3}$ ಭಾಗದ ಬೆಲೆಯನ್ನು ನಗದುರೂಪದಲ್ಲಿ ಕೊಡಲಾಗುತ್ತದೆ.

ಅಲ್ಪಾವಧಿ ಹಾಗೂ ಮಧ್ಯಮಾವಧಿ ಸಾಲಗಳನ್ನು ನೀಡಲು ಮೂರು ಬಗೆಯ ವ್ಯವಸ್ಥೆಯನ್ನು ಮಾಡಲಾಗಿದೆ. ರಾಜ್ಯಮಟ್ಟ ದಲ್ಲಿ ಆಪೆಕ್ಸ್ ಬ್ಯಾಂಕು, ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರಿ ಬ್ಯಾಂಕು ಹಾಗೂ ಗ್ರಾಮಾಂತರ ಮಟ್ಟದಲ್ಲಿ ಪ್ರಾಥಮಿಕ ಸಹ ಕಾರ ಸಂಸ್ಥೆಗಳು ಹೀಗೆ ಮೂರು ಬಗೆಗಳಿದ್ದು, ಅವು ಅಲ್ಪಾವಧಿ ಮಧ್ಯಮಾವಧಿ ಸಾಲವನ್ನು ಅನುಕ್ರಮವಾಗಿ ಒದಗಿಸುತ್ತವೆ. 1967ರಲ್ಲಿ ಕರ್ನಾಟಕದಲ್ಲಿ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲವನ್ನು 1790.58 ಲಕ್ಷ ರೂ. ಮತ್ತು 271.15 ಲಕ್ಷ ರೂ. ಹಂಚಲಾಯಿತು. 1970–71ರ ಹೊತ್ತಿಗೆ ಈ ಸಂಖ್ಯೆ ಗಳನ್ನು ದ್ವಿಗುಣಗೊಳಿಸಲು ಪ್ರಯತ್ನಗಳನ್ನು ಕೈಗೊಳ್ಳ ಲಾಗಿದ್ದು ಸಾಕಷ್ಟು ಯಶಸ್ಸನ್ನು ಪಡೆಯಲಾಯಿತು.

ಸಾಮಾನ್ಯವಾಗಿ ಮಧ್ಯಮಾವಧಿ ಸಾಲಗಳಿಗೆ ಬೇಡಿಕೆಯು ಹೆಚ್ಚಿರುತ್ತವೆ. ಸ್ವಂತ ಜಮೀನುಳ್ಳ ರೈತ 6000 ರೂ.ವರೆಗೂ ಈ ಬಗೆಯ ಸಾಲವನ್ನು ಪಡೆಯಬಹುದು. 500 ರೂ.ಗಳ ವರೆಗೆ ವೈಯಕ್ತಿಕ ಜಾಮೀನಿನ ಮೇಲೆ ಸಾಲ ಪಡೆಯಬಹುದು. 500 ರೂ.ಗಳಿಗಿಂತ ಹೆಚ್ಚಾದರೆ ಭೂಮಿಯ ಆಧಾರದ ಮೇಲೆ ಸಾಲ ಪಡೆಯಬಹುದು. ಖಾಯಂ ಅಭಿವೃದ್ಧಿ ಕಾರ್ಯಗಳಿಗೆ ಕೊಡಲಾಗುವ ಸಾಲದ ಸದುಪಯೋಗದಿಂದ ಸದಸ್ಯರ ಮರು ಪಾವತಿಯ ಶಕ್ತಿ ಹೆಚ್ಚುತ್ತದೆ. ಆದರೆ ಸಾಲವನ್ನು ವಿತರಣೆ ಮಾಡುವಾಗ ಸದಸ್ಯರ ಮರುಪಾವತಿಯ ಶಕ್ತಿಯನ್ನು ಗಮನಿಸ ಬೇಕಾದುದು ಅಗತ್ಯ. ಕೆಲವು ವೇಳೆ ಮಳೆ ಬಾರದಿದ್ದ ಸಂದರ್ಭ ಗಳಲ್ಲಿ ಅಲ್ಪಾವಧಿ ಸಾಲವನ್ನು ಒಂದು ವರ್ಷದಲ್ಲಿ ತೀರಿಸಲು ರೈತರಿಗೆ ಸಾಧ್ಯವಾಗುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಅಲ್ಪಾ ವಧಿ ಸಾಲವನ್ನು ಮಧ್ಯಮಾವಧಿ ಸಾಲವನ್ನಾಗಿ ಪರಿವರ್ತಿಸ ಬಹುದು.

ಮೊದಲಿಗೆ ಈ ಎರಡು ಬಗೆಯ ಸಾಲಗಳನ್ನು ಪಡೆಯಲು ರೈತರು ಬಹಳ ಕಷ್ಟಪಡಬೇಕಾಗಿತ್ತು. ಆದರೆ ಇತ್ತೀಚೆಗೆ ಎಲ್ಲಾ ನಿಯಮಗಳನ್ನೂ ಸಡಿಲಗೊಳಿಸಿರುವುದರಿಂದ ರೈತರು ಸಾಲ ವನ್ನು ಸುಲಭವಾಗಿ ಪಡೆಯಬಹುದಾಗಿದೆ. ಒಂದು ಅರ್ಜಿಯಲ್ಲಿ ಸಾಲದ ಮೊತ್ತ, ಉದ್ದೇಶಗಳನ್ನು ವಿವರವಾಗಿ ಬರೆದು ಗ್ರಾಮ ದಲ್ಲಿನ ಸಹಕಾರ ಸಂಸ್ಥೆಗೆ ಸಲ್ಲಿಸಿದರೆ, ಅದರ ಪರಿಶೀಲನೆ ಯನ್ನು ಮಾಡಿ ಸಂಸ್ಥೆಯ ಮುಖ್ಯಾಧಿಕಾರಿಗಳು ಕೂಡಲೇ ಸಾಲವನ್ನು ಮಂಜೂರು ಮಾಡುವರು.

**ದೀರ್ಘಾವಧಿ ಸಾಲ :**

ಇಂದಿನ ರೈತರು ಹಿಂದೆ ನಮ್ಮ ತಾತ-ಮುತ್ತಾತಂದಿರು ಅನುಸರಿಸುತ್ತಿದ್ದ ಕೃಷಿಯ ರೀತಿಯನ್ನೇ ಇಂದಿಗೂ ಅನುಸರಿಸಿದರೆ ಅವರ ಜೀವನ ನಡೆಯುವುದು ದುಸ್ಸಾಧ್ಯವಾಗುತ್ತದೆ. ಇಂದಿನ ರೈತರು ತಮ್ಮ ಬದುಕಿನಲ್ಲಿ ಸುಖ-ಸಂತೋಷ ನೆಮ್ಮದಿಗಳನ್ನು ಕಾಣಬೇಕಾದರೆ ಹೆಚ್ಚು ಬೆಳೆಯನ್ನು ಉತ್ಪತ್ತಿ ಮಾಡಬೇಕಾಗು ತ್ತದೆ. ಭೂಮಿಯನ್ನು ಶಾಶ್ವತವಾಗಿ ಉತ್ತಮ ಪಡಿಸಲು ಅನೇಕ ಆಧುನಿಕ ಸುಧಾರಣೆಗಳನ್ನು ಕೈಗೊಳ್ಳಬೇಕಾಗುತ್ತದೆ. ಭೂಮಿ ಯಲ್ಲಿ ನೀರಾವರಿ ಬಾವಿಯನ್ನು ತೋಡಿಸಲು, ಕಾಲುವೆಗಳನ್ನು ನಿರ್ಮಿಸಲು, ತೋಟ ಗದ್ದೆಗಳ ಸುತ್ತಲೂ ಬೇಲಿಗಳನ್ನು ಕಟ್ಟಲು, ಟ್ರಾಕ್ಟರ್, ಕೊಯ್ಲು ಯಂತ್ರ ಮುಂತಾದ ನವೀನ ಯಂತ್ರೋಪಕರಣಗಳನ್ನು ಕೊಳ್ಳಲು ರೈತರಿಗೆ ಹೆಚ್ಚು ಹಣ ಬೇಕಾಗುತ್ತದೆ. ಇದನ್ನು ದೀರ್ಘಾವಧಿ ಸಾಲ ಒದಗಿಸುತ್ತದೆ. ಈ ಸಾಲವನ್ನು ಒಂದೇ ವರ್ಷದ ಅವಧಿಯಲ್ಲಿ ತೀರಿಸಲು ಸಾಧ್ಯ ವಾಗುವುದಿಲ್ಲ. ಆದ್ದರಿಂದ ರೈತರಿಗೆ ತೊಂದರೆಯಾಗದಂತೆ ಸುಲಭ ಕಂತುಗಳಲ್ಲಿ ತೀರಿಸಲು ಈ ವಿಧಾನದಲ್ಲಿ ಹೆಚ್ಚಿನ ಕಾಲಾವಕಾಶ

ಉತ್ಪಾದನೆ ಹೆಚ್ಚಿಸಲು ಸಹಕಾರ ಸಂಸ್ಥೆಗಳ ರೂಪ ವೈವಿಧ್ಯಗಳ

ನ್ನು ಅಂದರೆ 5ರಿಂದ 15 ವರ್ಷಗಳವರೆಗೆ ಕೊಡಲಾಗಿದ್ದು, ಹಣವನ್ನು ಕಂತುಗಳ ರೂಪದಲ್ಲಿ ಮರಳಿ ಪಡೆಯಲಾಗುತ್ತದೆ. ಈ ಬಗೆಯ ಸಾಲವನ್ನು ಜಮೀನಿನ ಆಧಾರದ ಮೇಲೆ ಕೊಡಲಾಗುವುದು.

ದೀರ್ಘಾವಧಿ ಸಾಲವನ್ನು ಎರಡು ಬಗೆಯ ವ್ಯವಸ್ಥೆಯಲ್ಲಿ ರೈತರಿಗೆ ನೀಡಲಾಗುವುದು. ತಾಲ್ಲೂಕು ಮಟ್ಟದಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳು ಹಾಗೂ ರಾಜ್ಯಮಟ್ಟದಲ್ಲಿ ಕೇಂದ್ರ ಭೂ ಅಭಿವೃದ್ಧಿ ಬ್ಯಾಂಕುಗಳು ಹಣವನ್ನು ನೀಡುತ್ತವೆ. ಬಂಡವಾಳ, ಸರಕುಗಳು ಹಾಗೂ ಭೂ ವ್ಯವಸ್ಥೆಗೆ ಬೇಕಾಗುವ ದೀರ್ಘಾವಧಿಯ ಸಾಲಗಳನ್ನು ಒದಗಿಸಲೋಸುಗ ಇವುಗಳು ಸ್ಥಾಪಿಸಲ್ಪಟ್ಟವೆ. 1971-72ರಲ್ಲಿ 869 ಭೂ ಅಭಿವೃದ್ಧಿ ಬ್ಯಾಂಕುಗಳಿದ್ದು 577 ಬ್ಯಾಂಕುಗಳು ಕೇವಲ 3 ರಾಜ್ಯಗಳಲ್ಲಿ ಕೇಂದ್ರೀಕೃತವಾಗಿದ್ದವು. ಆ ರಾಜ್ಯಗಳೆಂದರೆ ಆಂಧ್ರ, ಕರ್ನಾಟಕ, ತಮಿಳುನಾಡು. ಈಗ ನಮ್ಮ ದೇಶದಲ್ಲಿ ಸುಮಾರು 1350 ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಕಾರ್ಯ ರೂಪದಲ್ಲಿವೆ. ಕೆಲವು ರಾಜ್ಯಗಳಲ್ಲಿ ಕ್ಷೇತ್ರಮಟ್ಟದಲ್ಲಿ ಪ್ರಾಥಮಿಕ ಬ್ಯಾಂಕು ಕಚೇರಿಗಳನ್ನು ಸಂಘಟಿಸಲಾಗಿದೆ.

ಭೂ ಅಭಿವೃದ್ಧಿ ಬ್ಯಾಂಕುಗಳು ಇಂದು ರೈತರ ಜೀವನದಲ್ಲಿ ಹಾಸುಹೊಕ್ಕಾಗಿ ಕೃಷಿ ಅಭಿವೃದ್ಧಿಯಲ್ಲಿ ತಮ್ಮದೇ ಆದ ಸಾರ್ವಭೌಮತ್ವವನ್ನು ಹೊಂದಿವೆ. ಬಹಳ ಹಿಂದಿನಿಂದಲೂ ನಡೆದು ಬಂದಿರುವ ರೈತರ ಋಣಭಾರವನ್ನು ತೆಗೆದುಹಾಕಿ ಕೃಷಿಕಾರ್ಯಗಳಿಗೆ ರಿಯಾಯತಿ ದರದಲ್ಲಿ ಸಾಲಗಳನ್ನು ಒದಗಿಸಿ ರೈತರ ಜೀವನ ಮಟ್ಟವನ್ನು ಸುಧಾರಿಸಲು ಸಹಕಾರ ಸಂಸ್ಥೆಗಳೊಂದಿಗೆ ಭೂ ಅಭಿವೃದ್ಧಿ ಬ್ಯಾಂಕುಗಳು ನಿರ್ಮಾಣಗೊಂಡಿವೆ. ಕೃಷಿ ಸಾಲ

ಕ್ಷೇತ್ರದಲ್ಲಿ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗ
ಜೊತೆಗೆ ದೀರ್ಘಾವಧಿ ಸಾಲವು ಅತ್ಯಂತ ಮಹತ್ವದ್ದಾಗಿ
ಏಕೆಂದರೆ ಕೇವಲ ಮೊದಲ ಎರಡು ಬಗೆಯ ಸಾಲಗಳಿಂದ ರೈ
ಆರ್ಥಿಕಸ್ಥಿತಿ ಸುಧಾರಿಸುವುದು ಸಾಧ್ಯವಿಲ್ಲ. ರೈತರು ಹಿಂ
ಮಾಡಿದ ಸಾಲವನ್ನೇ ತೀರಿಸಿರುವುದಿಲ್ಲವಾದ್ದರಿಂದ ಅವರಿಗೆ ಮ
ಪಾವತಿಯ ಅವಧಿಯು ದೀರ್ಘವಾದಷ್ಟೂ ಉತ್ತಮ. ಆದ
ರಿಂದ ದೀರ್ಘಾವಧಿ ಸಾಲಗಳನ್ನು ಸಹಕಾರ ಸಂಸ್ಥೆಗಳ ಜೊತೆ
ಇಂದು ಭೂ ಅಭಿವೃದ್ಧಿ ಬ್ಯಾಂಕುಗಳೂ ನೀಡುತ್ತಿವೆ. ಇತ್ತೀಚೆ
ಈ ಬ್ಯಾಂಕುಗಳ ಕಾರ್ಯಕ್ಷೇತ್ರ ವಿಶಾಲವಾಗಿದ್ದು ಸಾ
ನೀಡಿಕೆಯ ಮೊತ್ತವೂ ಏರಿದೆ. ಕಾಫಿ, ಟೀ, ಅಡಿಕೆ ಮುಂತಾ
ತೋಟಗಾರಿಕೆ ಕೃಷಿಯನ್ನು ಅಭಿವೃದ್ಧಿಗೊಳಿಸಲು ಈ
ಬ್ಯಾಂಕುಗಳು ರೈತರಿಗೆ ಸಾಲ ನೀಡುತ್ತಿವೆ. ಈ ಬ್ಯಾಂಕುಗಳಿಂ
ಸುಮಾರು 35 ಲಕ್ಷ ರೈತ ಕುಟುಂಬಗಳಿಗೆ ಸಾಲವನ್ನು ಇಲ್ಲಿಯ
ವರೆಗೆ ನೀಡಲಾಗಿದೆಯೆಂದು ತಿಳಿದುಬಂದಿದೆ. ಇಂದಿನ ದಿನಗಳ
ಭೂ ಅಭಿವೃದ್ಧಿ ಬ್ಯಾಂಕುಗಳು ಒದಗಿಸುವ ಸಾಲದ ನೆರವಿನಿಂ
ಕೃಷಿ ಉತ್ಪಾದನೆಯಲ್ಲಿ ವಿಶಿಷ್ಟ ಪರಿಣಾಮ ಕಂಡುಬಂದಿದೆ
ಇತ್ತೀಚಿಗೆ ರೈತರಿಗೆ ಸಾಲದ ಸೌಲಭ್ಯ ನೀಡುವುದರ ಮೂಲ
ಕೃಷಿಯ ವಿಶೇಷ ಅಭಿವೃದ್ಧಿಗಾಗಿ ಮತ್ತೊಂದು ಸಂಸ್ಥೆಯ
ಜನ್ಮತಾಳಿದೆ. ಅದು 'ಕೃಷಿ ಮರುಹಣಕಾಸಿನ ಸಂಸ್ಥೆ
(Agricultural Refinance Corporation) ಸಹಕಾ
ರಂಗದಲ್ಲಿ ಈ ಸಂಸ್ಥೆಯು ಒಂದು ಹೆಮ್ಮೆಯ ಸಾಧನೆಯಾಗಿದೆ
ಈ ಸಂಸ್ಥೆ ದೀರ್ಘಾವಧಿ ಕೃಷಿ ಸಾಲದ ಪೂರೈಕೆಯನ್ನು
ಮಾಡುತ್ತದೆ. ಆದರೆ ಈ ಸಂಸ್ಥೆಯು ಹಣವನ್ನು ರೈತರಿ
ನೇರವಾಗಿ ಕೊಡುವುದಿಲ್ಲ. ರಾಜ್ಯದಲ್ಲಿರುವ ಕೇಂದ್ರ ಭೂ

ಅಭಿವೃದ್ಧಿ ಬ್ಯಾಂಕುಗಳಿಗೂ, ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಿಗೂ ರೈತರಿಗೆ ಸಾಲ ನೀಡಲು ಹಣದ ನೆರವನ್ನು ಕೊಡುತ್ತದೆ. ಈ ಸಂಸ್ಥೆಯ ಬಂಡವಾಳವು 5 ಕೋಟಿ ರೂಗಳಿದ್ದು, ಈ ಹಣವನ್ನು ಕೇಂದ್ರ ಸರಕಾರವು ಬಡ್ಡಿರಹಿತ ಸಾಲವಾಗಿ ನೀಡಿದೆ. ಈ ಸಂಸ್ಥೆಯು ವಿಸ್ತಾರವಾದ ಕಾರ್ಯ ಕ್ಷೇತ್ರವನ್ನು ಹೊಂದಿದೆ. ದೀರ್ಘಾವಧಿ ಸಾಲ ನೀಡಿಕೆಯ ಸಂಸ್ಥೆಗಳಿಗೆ ಬಂಡವಾಳ ಒದಗಿಸುವುದಲ್ಲದೆ ಸಂಪನ್ಮೂಲಗಳನ್ನು ಅಧಿಕಗೊಳಿಸುತ್ತದೆ. ಇದರಿಂದಾಗಿ ಟೀ, ರಬ್ಬರ್ ಇತ್ಯಾದಿ ಹಣದ ಬೆಳೆಗಳಲ್ಲಿ ಹೆಚ್ಚಿನ ಉತ್ಪತ್ತಿ ಸಾಧಿಸಲು ಕಾರಣವಾಗಿದೆ. ಇತ್ತೀಚೆಗೆ ಈ ಸಂಸ್ಥೆಯು ಮಧ್ಯಮಾವಧಿ ಕೃಷಿ ಸಾಲ ನೀಡಿಕೆಯ ಸಂಸ್ಥೆಗಳಿಗೂ ಬಂಡವಾಳವನ್ನು ಪೂರೈಸುತ್ತಿದ್ದು ತನ್ನ ಕಾರ್ಯವ್ಯಾಪ್ತಿಯನ್ನು ಬಾವಿನಿರ್ಮಾಣ, ನೀರಾವರಿ, ಕೋಳಿ ಸಾಕಾಣಿಕೆ, ಮೀನುಗಾರಿಕೆ ಮತ್ತು ಪಶು ಸಂಗೋಪನೆ ಮುಂತಾದ ಕಾರ್ಯಗಳಿಗೆ ವಿಸ್ತರಿಸಿದೆ. ಕೃಷಿ ಬೆಳವಣಿಗೆಯಲ್ಲಿ ಈ ಸಂಸ್ಥೆ ಸಾಧಿಸಿರುವ ಪ್ರಗತಿ ಅಮೋಘವಾದುದು. ಇದಕ್ಕೆ ಕಾರಣಗಳು—

(1) ಈ ಸಂಸ್ಥೆಯು ಕೃಷಿಕ್ಷೇತ್ರದ ಪ್ರಗತಿಗೆ ತಕ್ಕಂತೆ ತನ್ನ ಕಾರ್ಯಕ್ಷೇತ್ರವನ್ನು ರೂಪಿಸಿಕೊಂಡಿರುವುದು.

(2) ತನ್ನ ಸಾಲ ನಿಯಮಗಳನ್ನು ಸಡಿಲಿಸಿ, ಸಾಲ ಪಡೆಯಲು ಯೋಗ್ಯವಾದ ಸಂಸ್ಥೆಗಳು ಹೆಚ್ಚು ಸಾಲ ಪಡೆಯಲು ಅನುಕೂಲ ಮಾಡಿಕೊಟ್ಟಿರುವುದು.

ಕೇವಲ ಹಣ ನೀಡಿಕೆಯಷ್ಟೇ ಈ ಸಂಸ್ಥೆಯ ಗುರಿಯಲ್ಲ. ಸೂಕ್ತ ಯೋಜನೆಗಳನ್ನು ಮಂಜೂರು ಮಾಡುವುದು, ಭೂ ಅಭಿವೃದ್ಧಿಗೆ ನೆರವಾಗುವುದು ಮುಂತಾದ ಕಾರ್ಯಗಳನ್ನು

ಸಾಧಿಸುವುದೂ ಆಗಿದೆ. ಸಣ್ಣ ಹಿಡುವಳಿಗಳಲ್ಲಿ ಆಧುನಿ
ರೀತಿಯ ಕೃಷಿಯನ್ನು ಕೈಗೊಳ್ಳುವುದು ಕಷ್ಟಸಾಧ್ಯವಾದ್ದರಿ
ಈ ಸಂಸ್ಥೆಗಳು ಸಂಘಟಿತ ಹಿಡುವಳಿಗಳಲ್ಲಿ ಆಧುನಿಕ ರೀತಿ
ಕೃಷಿಗೆ ಬೇಕಾದ ಅನುಕೂಲತೆಗಳನ್ನು ಪೂರೈಸುತ್ತಿವೆ. ಯೋಜ
ಗಳನ್ನು ರೂಪಿಸಿಕೊಂಡು, ಯೋಜನಾ ಅಧಿಕಾರಿಗಳನ್ನು ನೇಮಿ
ಕೊಂಡು ಅವರ ಮೂಲಕ ಕೃಷಿ ಕಾರ್ಯಗಳಿಗೆ ನೆರವಾಗುತ್ತಿ
ಇಂದು ಕೃಷಿರಂಗ ಅಭಿವೃದ್ಧಿ ಹೊಂದಬೇಕಾದರೆ ಈ ಸಂಸ್ಥೆ
ನೆರವು ಬಹಳ ಅಗತ್ಯವಾಗಿದೆ.

ಕೃಷಿ ಉತ್ಪಾದನಾ ಸಾಧನಗಳ ಪೂರೈಕೆ :

ಕೃಷಿಯಲ್ಲಿ ಉತ್ತಮವಾದ, ಹುಲುಸಾದ ಫಸಲನ್ನು ಪಡೆದ
ಉತ್ಪತ್ತಿಯನ್ನು ಹೆಚ್ಚಿಸಬೇಕಾದರೆ ಸುಧಾರಿಸಿದ ಬೀಜಗಳ
ರಸಾಯನಿಕ ಗೊಬ್ಬರಗಳು, ಕ್ರಿಮಿನಾಶಕ ಔಷಧಿಗಳು ನವಿ
ರೀತಿಯ ಉಪಕರಣಗಳು ಬೇಕು. ಇದಕ್ಕೆಲ್ಲಾ ಕಳಶವಿಟ್ಟಂ
ಮುಖ್ಯವಾಗಿ ನೀರಿನ ಸೌಕರ್ಯವಿರಬೇಕು. ಈ ರೀತಿ
ವ್ಯವಸ್ಥಿತ ಕ್ರಮವಿದ್ದರೆ ಕೃಷಿಯನ್ನು ಒಂದು ಲಾಭಕರ ಉದ್ದಿ
ಯನ್ನಾಗಿ ಪರಿವರ್ತಿಸುವುದು ಬಹಳ ಸುಲಭ. ಈ ಎಲ
ಸಲಕರಣೆಗಳಿದ್ದು ರೈತರು ಆಸಕ್ತಿಯಿಂದ ಶ್ರಮವಹಿಸಿ ದುಡಿದ
ಕೃಷಿ ಉತ್ಪತ್ತಿ ಹೆಚ್ಚುವುದರಲ್ಲಿ ಸಂಶಯವಿಲ್ಲ. ಆದ್ದರಿ
ಸಹಕಾರ ಸಂಸ್ಥೆಗಳು ಹಣದ ರೂಪದಲ್ಲಿ ಸಾಲ ಕೊಡುವುದ
ಜೊತೆಗೆ ವಸ್ತುರೂಪದಲ್ಲೂ ಕೃಷಿ ಸಾಧನಗಳನ್ನು ಪೂರೈಸ
ಮುಂದೆ ಬಂದಿವೆ. ಇದಕ್ಕೆ ಕಾರಣ ರೈತರು ಸಾಗುವಳಿ
ಉದ್ದೇಶಕ್ಕಾಗಿ ಪಡೆದ ಹಣದ ಸಾಲವನ್ನು ಇತರ ಕಾರ್ಯಗಳ
ಬಳಸಬಹುದು. ವಿವಿಧ ಸಮಿತಿಗಳ ಅಭಿಪ್ರಾಯದಂತೆ ರೈತ
ಪಡೆದ ಸಾಲದಲ್ಲಿ ಶೇಕಡ 30ರಷ್ಟಾದರೂ ಗೃಹಕೃತ್ಯದ ವೆ

ಕ್ಕಾಗಿ ಬಳಸುತ್ತಾರೆಂದು ತಿಳಿದುಬಂದಿದೆ. ಆದರೆ ವಸ್ತುಗಳನ್ನೇ ಸಾಲದ ರೂಪದಲ್ಲಿ ಕೊಟ್ಟರೆ ಈ ರೀತಿ ಆಗಲು ಅವಕಾಶವಿರುವುದಿಲ್ಲ. ಆದ್ದರಿಂದ ಸಹಕಾರ ಸಂಸ್ಥೆಗಳು ಕೃಷಿಯ ಉತ್ಪಾದನಾ ಸಾಧನಗಳನ್ನು ಸಾಲದ ರೂಪದಲ್ಲಿ ರೈತರಿಗೆ ಒದಗಿಸುತ್ತವೆ. ಉತ್ತಮ ಬೀಜಗಳು ಹಾಗೂ ರಸಾಯನಿಕ ಗೊಬ್ಬರಗಳನ್ನು ಬಳಸಿ ಕೃಷಿಯನ್ನು ಮಾಡಿದರೆ ಉತ್ಪನ್ನ ಹೆಚ್ಚುವುದು. ಆದ್ದರಿಂದ ಉತ್ಪಾದನಾ ಸಾಧನಗಳನ್ನು ಸಕಾಲದಲ್ಲಿ ರೈತರಿಗೆ ಒದಗಿಸುವುದರ ಜೊತೆಗೆ ಸಹಕಾರ ಸಂಸ್ಥೆಗಳು ಗ್ರಾಮಾಂತರ ಪ್ರದೇಶದಲ್ಲಿರುವ ಕೆರೆ, ಬಾವಿ ಮುಂತಾದ ನೀರಾವರಿ ಸೌಕರ್ಯಗಳನ್ನು ಹೆಚ್ಚಿಸಲು ಪ್ರಯತ್ನಿಸುತ್ತಿವೆ.

**ಬೆಳೆ ಸಾಲ (Crop loan) :**

ಬೆಳೆ ಸಾಲವೆಂದರೆ ಬೆಳೆಯ ಆಧಾರದ ಮೇಲೆ ಸಹಕಾರ ಸಂಸ್ಥೆಗಳು ರೈತರಿಗೆ ಕೊಡುವ ಸಾಲ. ಈ ಬಗೆಯ ಸಾಲವನ್ನು ರೈತರು ಪ್ರಾಥಮಿಕ ಸಹಕಾರ ಸಂಘಗಳಿಂದ ಅಥವಾ ಸೇವಾ ಸಹಕಾರ ಸಂಘಗಳಿಂದ ಪಡೆಯಬಹುದು. ಬೆಳೆ ಸಾಲ ಕೊಡುವಾಗ ಹಿಂದಿನ ಪದ್ಧತಿಯನ್ನು ಅನುಸರಿಸಿ ಕೃಷಿ ಮಾಡುವ ರೈತರಿಗೆ ಒಂದು ಎಕರೆ ಭೂಮಿಯಲ್ಲಿ ಬೆಳೆಯಬಹುದಾದ ಬೆಳೆಯ ಸರಾಸರಿ ಬೆಲೆಯ $\frac{1}{3}$ ಭಾಗದಷ್ಟು ಸಾಲವನ್ನು ನಗದು ರೂಪದಲ್ಲಿ ಕೊಡಲಾಗುವುದು. ಆಧುನಿಕ ರೀತಿಯಲ್ಲಿ ಸಾಗುವಳಿ ಮಾಡುವ ರೈತರಿಗೆ ಹೆಚ್ಚು ಭಾಗದ ಸಾಲವನ್ನು ಸಾಮಗ್ರಿಗಳ ರೂಪದಲ್ಲಿ ಕೊಡಲಾಗುತ್ತದೆ. ಜಿಲ್ಲಾ ಸಹಕಾರಿ ಕಾರ್ಯಕರ್ತರ ಸಮ್ಮೇಳನವು ಆಗಾಗ್ಗೆ ಸೇರಿ ರೈತರಿಗೆ ಕೊಡುವ ಬೆಳೆ ಸಾಲದ ಪ್ರಮಾಣವನ್ನು ನಿರ್ಧರಿಸುತ್ತದೆ. ಪ್ರಾಥಮಿಕ ಸಂಘವು ಸದಸ್ಯನಿಗೆ ಬೇರೆ ಬೇರೆ ಬೆಳೆಗಳಿಗೆ ಕೊಡಬೇಕಾದ ವೈಯಕ್ತಿಕ ಸಾಲದ ಪರಿಮಿತಿ ಇಂತಿದೆ.

(1) ಒಣ ಬೇಸಾಯ ಪ್ರದೇಶ

2000 ರೂ.ಗಳಿಂದ 3000 ರೂ.ಗ

(2) ತೋಟಗಾರಿಕೆ ಪ್ರದೇಶ

3000 ರೂ.ಗಳಿಂದ 5000 ರೂ.ಗ

(3) ನೀರಾವರಿ ಪ್ರದೇಶ

3000 ರೂ.ಗಳಿಂದ 10,000 ರೂ.ಗ

ಇದಕ್ಕಿಂತ ಹೆಚ್ಚಿಗೆ ಸಾಲ ಪಡೆಯಲಿಚ್ಛಿಸುವ ಸದಸ್ಯ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರಿಗೆ ಅರ್ಜಿ ಸಲ್ಲಿಸಬೇಕಾಗುವುದು

**ಸಹಕಾರಿ ಸಾಗುವಳಿ ಸಂಸ್ಥೆಗಳು :**

ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೆರವಾಗು ಮತ್ತೊಂದು ಸಂಸ್ಥೆಯೆಂದರೆ ಸಹಕಾರಿ ಸಾಗುವಳಿ ಸಂಸ್ಥೆ ಸಹಕಾರಿ ಸಾಗುವಳಿಯು ಒಂದು ವಿಶಿಷ್ಟವಾದ, ಸ್ವತಂತ್ರವಾ ಹಾಗೂ ಪ್ರಜಾಸತ್ತಾತ್ಮಕವಾದ ಒಂದು ಕೃಷಿ ಪದ್ಧತಿ. ಈ ಪದ್ಧತಿಯು ಅಧಿಕ ಉತ್ಪಾದನೆಗೆ ದಾರಿ ಮಾಡಿಕೊಡುತ್ತದ ಇಂದು ಸಹಕಾರಿ ಸಾಗುವಳಿಯು ಕೃಷಿ ಕ್ಷೇತ್ರದಲ್ಲಿ ಒಂದ ಮೈಲಿಗಲ್ಲಾಗಿದೆ ಎಂದು ಹೇಳಬಹುದು. ಕಡಿಮೆ ಭೂಮಿಯುಳ ರೈತರಿಗೆ ಈ ಪದ್ಧತಿಯು ವರಪ್ರದಾನವಾಗಿದೆಯೆಂದರೆ ಅ ಶಯೋಕ್ತಿಯೇನೂ ಅಲ್ಲ. ಇದರಿಂದ ದೇಶದ ಆರ್ಥಿಕ ಮತ್ತು ಸಾಮಾಜಿಕ ಭದ್ರತೆಯು ಉತ್ತಮಗೊಳ್ಳುತ್ತದೆ.

ಸಹಕಾರಿ ಸಾಗುವಳಿ ಸಂಸ್ಥೆಯು ಸಾಮಾನ್ಯವಾಗಿ ಭೂಹೀನ ಅಥವಾ ನಿರ್ಗತಿಕ ಚಿಕ್ಕ ಬೇಸಾಯಗಾರರ ಸಂಸ್ಥೆಯಾಗಿದೆ ಹಳ್ಳಿಯಲ್ಲಿರುವ ರೈತರು ಒಂದೆಡೆ ಕೂಡಿ ಈ ರೀತಿಯ ಸಂಸ್ಥೆ ಯನ್ನು ಸ್ಥಾಪಿಸಿಕೊಳ್ಳುವರು. ಈ ರೀತಿ ಸ್ಥಾಪಿಸಿದ ಸಂಸ್ಥೆಗ ತಮ್ಮ ಭೂಮಿಯನ್ನು ಕೊಡುವರು. ಭೂಮಿಯ ಮಾಲೀಕತ್ವ

ಅಥವಾ ಒಡೆತನ ಮಾತ್ರ ರೈತನ ಹೆಸರಿನಲ್ಲಿಯೇ ಇರುತ್ತದೆ. ಎಲ್ಲರೂ ತಮ್ಮ ಎತ್ತುಗಳು ಹಾಗೂ ಸಾಗುವಳಿಯ ಸಲಕರಣೆಗಳನ್ನು ಸಹಕಾರಿ ಸಂಸ್ಥೆಯ ಬೇಸಾಯದಲ್ಲಿ ತೊಡಗಿಸುವರು. ಸಂಸ್ಥೆಯು ಸಣ್ಣ ಸಣ್ಣ ಹಿಡುವಳಿಗಳನ್ನು ವೈಜ್ಞಾನಿಕವಾಗಿ ಬಿಂಗಡಿಸಿ ದೊಡ್ಡ ಹಿಡುವಳಿಗಳನ್ನಾಗಿ ಮಾಡಿ ಸಾಗುವಳಿ ಮಾಡುವುದು. ಎಲ್ಲಾ ರೈತರೂ ಸಂಸ್ಥೆಯ ಹೊಲಗಳಲ್ಲಿ ದುಡಿಯುವರು. ಸಂಸ್ಥೆಯು ಗೊತ್ತುಪಡಿಸಿದ ಕೂಲಿಯನ್ನು ಪಡೆಯುವರು. ಬಂದ ಬೆಳೆಯನ್ನು ಮಾರಾಟ ಸಂಸ್ಥೆಗಳ ಮೂಲಕ ಮಾರಾಟ ಮಾಡಿ ಬಂದ ಉತ್ಪನ್ನದಲ್ಲಿ ವರ್ಷದ ಎಲ್ಲಾ ಖರ್ಚುಗಳನ್ನು ಕಳೆಯಲಾಗುವುದು. ಉಳಿದ ಲಾಭವನ್ನು ಎಲ್ಲಾ ರೈತರು ಹಂಚಿಕೊಳ್ಳುವರು. ಈ ರೀತಿ ಸಹಕಾರಿ ಸಾಗುವಳಿಯನ್ನು ಆಚರಣೆಗೆ ತರುವುದರಿಂದ ತಾಂತ್ರಿಕ ಉಪಕರಣಗಳ ಮೂಲಕ ಹೆಚ್ಚು ಬೆಳೆಯನ್ನು ಪಡೆಯಬಹುದು. ಸಹಕಾರಿ ಸಾಗುವಳಿಯಿಂದ ಮಾತ್ರ ತುಂಡು ಹಿಡುವಳಿಗಳನ್ನು ಸಂಘಟಿಸಿ ಚಿಕ್ಕ ಬೇಸಾಯಗಾರರ ಬೇಸಾಯವನ್ನು ಸುಧಾರಿಸಿ, ಆದಾಯವನ್ನು ಹೆಚ್ಚಿಸುವುದರ ಮೂಲಕ ಅವರ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದು ಸಾಧ್ಯ. ಇದರಿಂದ ಆಹಾರದಲ್ಲಿ ದೇಶವು ಸ್ವಾವಲಂಬಿಯಾಗಿ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವುದು.

ಭಾರತದಲ್ಲಿ ಸಹಕಾರಿ ಸಾಗುವಳಿಯು ಬಹಳ ಪ್ರಸಿದ್ಧಿ ಹೊಂದಿದೆ ಹಾಗೂ ಇದರ ಅಭಿವೃದ್ಧಿಗಾಗಿ ಹೆಚ್ಚಿನ ಉತ್ತೇಜನವನ್ನು ಕೊಡಲಾಗುತ್ತಿದೆ. ಇದರ ಮುಖ್ಯ ಉದ್ದೇಶ ಸಣ್ಣ ಸಣ್ಣ ಭೂಹಿಡುವಳಿಗಳ ರೈತರನ್ನು ರಕ್ಷಿಸುವುದರ ಮೂಲಕ ರಾಷ್ಟ್ರದ ಅಭ್ಯುದಯವನ್ನು ಸಾಧಿಸುವುದು.

ಸಹಕಾರಿ ಸಾಗುವಳಿಯ ಕೆಲವು ವಿಶಿಷ್ಟ ಲಕ್ಷಣಗಳು:

(1) ಈ ಪದ್ಧತಿಯಲ್ಲಿ ಕೃಷಿ ಉತ್ಪತ್ತಿ ಹೆಚ್ಚಿಸಲು ಸಣ್ಣ ಸಣ್ಣ ಹಿಡುವಳಿಗಳನ್ನು ಒಟ್ಟುಗೂಡಿಸಿದರೂ ಸಹ ಭೂಮಿಯ ಒಡೆತನದಲ್ಲಿ ಯಾವ ಪರಿವರ್ತನೆಯೂ ಆಗುವುದಿಲ್ಲ. ಅಂದರೆ ರೈತನ ವೈಯಕ್ತಿಕ ಒಡೆತನವನ್ನು ರದ್ದುಗೊಳಿಸದೆ ದೊಡ್ಡ ಪ್ರಮಾಣದ ಸಾಗುವಳಿಗೆ ಬೇಕಾಗುವ ಎಲ್ಲಾ ಅನುಕೂಲ ಗಳನ್ನೂ ಈ ಪದ್ಧತಿಯು ಒದಗಿಸಿಕೊಡುತ್ತದೆ.

(2) ಈ ಸಂಸ್ಥೆಯು ರೈತರಿಗೆ ವಿರಾಮಕಾಲದಲ್ಲಿ ಗ್ರಾಮೋ ದ್ಯೋಗಗಳನ್ನು ಒದಗಿಸುತ್ತದೆ. ಇದರಿಂದ ಸಣ್ಣ ರೈತ ವರಮಾನ ಹೆಚ್ಚಿ ಆರ್ಥಿಕಸ್ಥಿತಿ ಸುಧಾರಿಸುತ್ತದೆ. ಅವರ ಜೀವ ಮಟ್ಟ ಏರುತ್ತದೆ.

(3) ಈ ಪದ್ಧತಿಯಲ್ಲಿ ನವೀನ ಉಪಕರಣಗಳನ್ನು ಬಳ ಆಧುನಿಕ ರೀತಿಯಲ್ಲಿ ಕೃಷಿಯನ್ನು ಕೈಗೊಂಡು ಅಧಿಕ ಉತ್ಪತ್ತಿ ಯನ್ನು ಪಡೆಯಬಹುದು.

4) ಈ ರೀತಿಯ ಕೃಷಿ ಪದ್ಧತಿಯಲ್ಲಿ ಸಹಕಾರದ ತತ್ವಗಳನ್ನು ಅನುಸರಿಸುವುದಕ್ಕೆ ಹೆಚ್ಚು ಅವಕಾಶವಿರುತ್ತದೆ.

(5) ಭೂಮಿ ಇಲ್ಲದ ರೈತರಿಗೆ ಸಹಕಾರಿ ಸಾಗುವಳಿ ಪದ್ಧ ಯಿಂದ ಉದ್ಯೋಗಾವಕಾಶಗಳನ್ನು ಕಲ್ಪಿಸುವುದರಿಂದ ಅವರ ಉತ್ಸಾಹದಿಂದ ದುಡಿಯಲು ಪ್ರೋತ್ಸಾಹ ಸಿಗುತ್ತದೆ.

(6) ಈ ಪದ್ಧತಿಯಲ್ಲಿ ಉಳುಮೆ ಮಾಡುವುದರಿಂದ ಭೂಮಿ ಯನ್ನು ಉತ್ಕೃಷ್ಟವಾಗಿಯೂ ಮತ್ತು ಪರಿಣಾಮಕಾರಿ ಯಾಗಿಯೂ ಉಪಯೋಗಿಸಬಹುದು.

ಈ ರೀತಿ ಸಣ್ಣಪ್ರಮಾಣದ ಸಾಗುವಳಿಯಿಂದಾಗುವ ನಷ್ಟ ಗಳನ್ನು ತಡೆಗಟ್ಟಿ ಕೃಷಿಯಲ್ಲಿ ಅಧಿಕ ಉತ್ಪಾದನೆಯನ್ನು ಪಡ

ರುವುದರ ಮೂಲಕ ರಾಷ್ಟ್ರದ ಆರ್ಥಿಕಾಭಿವೃದ್ಧಿಯನ್ನು ಹೊಂದಬಹುದು. ಸಹಕಾರಿ ಸಾಗುವಳಿಯ ಮುಖ್ಯ ತತ್ವ ಎಂದರೆ ಸಣ್ಣ ಬೇಸಾಯಗಾರರು ತಮ್ಮದೇ ಆದ ಸಾಧನಗಳನ್ನು ಒಂದುಗೂಡಿಸಿ ಅವುಗಳಿಂದ ಹೆಚ್ಚಿನ ಪ್ರಯೋಜನ ಪಡೆಯು ವುದು. ಈ ತತ್ವವನ್ನು ಸಂಸ್ಥೆಯ ಸದಸ್ಯರು ಮನದಟ್ಟುಮಾಡಿ ಕೊಂಡು ಅದರಂತೆ ನಡೆದರೆ ಹೊರಗಿನ ಸಹಾಯವಿಲ್ಲದೆ ಅನೇಕ ಸುಧಾರಣೆಗಳನ್ನು ಸಹಕಾರಿ ಸಾಗುವಳಿ ಸಂಸ್ಥೆಯು ಕೈಗೊಳ್ಳ ಬಹುದು. ಒಟ್ಟಿನಲ್ಲಿ ಸಹಕಾರಿ ಸಾಗುವಳಿ ಸಂಸ್ಥೆಯು ರೈತರ ಶಕ್ತಿ ಸಾಧನಗಳನ್ನು ಹೆಚ್ಚಿಸಿಕೊಂಡು ರೈತರಿಗೆ ಸ್ವಾವಲಂಬನೆಯ ದಾರಿ ತೋರುವ ಒಂದು ಸಜೀವ ಸಂಸ್ಥೆಯಾಗಿದೆ ಎನ್ನಬಹುದು. ಆದರೆ ನಮ್ಮ ದೇಶದಲ್ಲಿ ಸಹಕಾರಿ ಸಾಗುವಳಿಯು ಹೆಚ್ಚು ಜನ ಪ್ರಿಯವಾಗಿಲ್ಲ. ಇದಕ್ಕೆ ಕಾರಣ ರೈತ ತನ್ನ ಜೀವನಾಡಿಯಾ ಗಿರುವ, ಬದುಕಿನ ಸರ್ವಸ್ವವಾಗಿರುವ ಭೂಮಿಯನ್ನು ಸಂಸ್ಥೆಗೆ ಒಪ್ಪಿಸಲು ಸಿದ್ಧನಾಗುವುದು ಕಷ್ಟ. ಆದರೂ ಇತ್ತೀಚೆಗೆ ಸಹ ಕಾರಿ ಸಾಗುವಳಿಯತ್ತ ರೈತರ ಒಲವನ್ನು ಹರಿಸಲು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಮತ್ತು ಯೋಜನಾ ಆಯೋಗವು ಸಹಕಾರಿ ಸಾಗುವಳಿಯ ಬಗ್ಗೆ ಹೆಚ್ಚು ಪ್ರಸಾರಮಾಡಿ ಆಚರಣೆಗೆ ತರಲು ಪ್ರಯತ್ನಿಸುತ್ತಿವೆ.

ಸಹಕಾರಿ ಮಾರಾಟ ಸಂಸ್ಥೆಗಳು :

ಇಂದು ಸಹಕಾರಿ ಮಾರಾಟ ಸಂಸ್ಥೆಗಳು ರೈತರ ಉತ್ತಮ ಬದುಕಿಗೆ ದಾರಿ ತೋರುವ ದೀವಟಿಗೆಗಳಾಗಿವೆ. ಈ ಮಾರಾಟ ಸಂಸ್ಥೆಗಳ ಸೌಲಭ್ಯದಿಂದಾಗಿ ರೈತರು ತಕ್ಕಮಟ್ಟಿಗೆ ನೆಮ್ಮದಿಯ ಜೀವನವನ್ನು ನಡೆಸುವಂತಾಗಿದೆ. ಏಕೆಂದರೆ ರೈತರ ನೆಮ್ಮದಿಯ ಜೀವನಕ್ಕೆ ಕೇವಲ ಅವರು ಬೆಳೆದ ಬೆಳೆಯೊಂದಿದ್ದರೆ ಸಾಲದು.

ಆ ಬೆಳೆಗೆ ಒಳ್ಳೆಯ ಬೆಲೆ ಇರಬೇಕು. ಕೇವಲ ಕೃಷಿಯ ಉತ್ಪಾ ಅಧಿಕಗೊಂಡಾಕ್ಷಣ ರೈತರ ಆರ್ಥಿಕ ಸ್ಥಿತಿಗತಿಗಳು ಸುಧಾರಿಸು ದಿಲ್ಲ. ರೈತರಿಗೆ ಉಪ್ಪು, ಸೀಮೆಎಣ್ಣೆ, ಬಟ್ಟೆ, ಬೆಂಕಿಪೊಟ್ಟ ಮುಂತಾದ ಅನೇಕ ದಿನಬಳಕೆಯ ವಸ್ತುಗಳು ಬೇಕಾಗುತ್ತ ಇವನ್ನು ಕೊಳ್ಳಲು ಅವರಿಗೆ ಹಣ ಬೇಕಾಗುತ್ತದೆ. ಹಣ ಬ ಬೇಕಾದರೆ ಬೆಳೆದ ಆಹಾರಧಾನ್ಯಗಳನ್ನು ಮಾರಬೇಕಾಗುತ್ತ ಧಾನ್ಯಗಳನ್ನು ಮಾರಾಟ ಮಾಡಿದಾಗ ಯೋಗ್ಯ ಬೆಲೆ ದೊರೆ ವಂತಾದರೆ ಮಾತ್ರ ರೈತರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆ ಅವರ ನೆಮ್ಮದಿಯ ಬದುಕಿಗೆ ನಾಂದಿಯಾಗುತ್ತದೆ; ಮತ್ತ ಹೆಚ್ಚು ಉತ್ಸಾಹದಿಂದ ದುಡಿಯಲು ಕಾರಣವಾಗುತ್ತದೆ. ರೈ ಬಡತನಕ್ಕೆ ಮುಖ್ಯ ಕಾರಣ ಮಾರುಕಟ್ಟೆಗಳಲ್ಲಿರುವ ಕುಂ ಕೊರತೆಗಳೇ ಎಂದು ಹೇಳಬಹುದು. ಆದ್ದರಿಂದ ಈ ಕುಂ ಕೊರತೆಗಳನ್ನು ನಿವಾರಿಸಿ, ರಾಷ್ಟ್ರದ ಪ್ರಗತಿಯ ಪ್ರತೀಕವಾ ರುವ ರೈತರ ಅಭ್ಯುದಯಕ್ಕಾಗಿ ಹಾಗೂ ಅವರ ಉತ್ಪಾದನೆಗ ಯೋಗ್ಯ ಮಾರಾಟಕ್ಕಾಗಿ ಸರಕಾರವು ಅವಶ್ಯವಾದ ಕ್ರ ಗಳನ್ನು ಕೈಗೊಂಡಿತು. ಅದರ ಫಲವೇ ಸಹಕಾರಿ ಮಾರಾ ಸಂಘಗಳು.

ಹಿಂದಿನ ಕಾಲದಲ್ಲಿ ರೈತರ ಬಯಕೆಗಳಿಗೆ ಒಂದು ಮಿ ಇದ್ದುದರಿಂದ ಮಾರಾಟ ಸಂಸ್ಥೆಗಳ ಆವಶ್ಯಕತೆ ಕಂಡು ಬರಲಿ ಆದರೆ ಇಂದು ವೈಜ್ಞಾನಿಕ ಪ್ರಗತಿ ಮುಂದುವರಿದಂತೆಲ್ಲಾ ಜನ ಜೀವನ ಸಾಮಾಜಿಕವಾಗಿಯೂ, ಆರ್ಥಿಕವಾಗಿಯೂ ವಿಕಾ ಗೊಳ್ಳುತ್ತಿರುವುದರಿಂದ ಕಾಲಕ್ಕೆ ತಕ್ಕಂತೆ ರೈತರ ಬಯಕೆಗಳ ದಿನ ದಿನಕ್ಕೆ ಬೆಳೆಯುತ್ತಿವೆ. ಇಂದಿನ ಸಹಕಾರಿ ಮಾರಾ ಸಂಸ್ಥೆಗಳು ರೈತರ ಹೆಚ್ಚುತ್ತಿರುವ ಬಯಕೆಗಳನ್ನು ಪೂರೈ

ವುದರಲ್ಲಿ ಒಂದು ಉತ್ತಮ ಸಾಧನವಾಗಿ ಪರಿಣಮಿಸಿವೆಯೆಂದು ಹೇಳಬಹುದು. ಸಹಕಾರಿ ಮಾರಾಟವು ಸಮಗ್ರ ಕೃಷಿ ಉತ್ಪನ್ನ ಮಾರಾಟ ವ್ಯವಸ್ಥೆಯ ಒಂದು ಅವಿಭಾಜ್ಯ ಅಂಗವಾಗಿದ್ದು ಸಹ ಕಾರದ ತತ್ವದ ಮೇಲೆ ಕೆಲಸಗಳನ್ನು ನಿರ್ವಹಿಸುತ್ತದೆ. ನಮ್ಮ ದೇಶದಲ್ಲಿ ಸಹಕಾರಿ ಮಾರಾಟ ಸಂಸ್ಥೆಗಳು ಸಾಕಷ್ಟು ಪ್ರಮಾಣ ದಲ್ಲಿವೆ. ಈಗ ಇಡೀ ದೇಶದಲ್ಲಿ 3000ಕ್ಕೂ ಹೆಚ್ಚು ಮಾರಾಟ ಸಂಸ್ಥೆಗಳು ರೈತರಿಗೆ ದವಸಧಾನ್ಯಗಳನ್ನು ಯೋಗ್ಯ ಬೆಲೆಗೆ ಮಾರಾಟ ಮಾಡುವುದರಲ್ಲಿ ನೆರವಾಗುತ್ತಲಿವೆ.

**ಸಹಕಾರಿ ಮಾರಾಟ ಸಂಸ್ಥೆಗಳಿಂದಾಗುವ ಲಾಭಗಳು :**

ಸಹಕಾರಿ ಮಾರಾಟ ಸಂಸ್ಥೆಗಳು ಇಂದು ರೈತರಿಗೆ ವರವಾಗಿ ರೂಪುಗೊಂಡಿವೆಯೆಂದು ಹೇಳಬಹುದು. ಈ ಸಂಸ್ಥೆಗಳಿಂದ ಅನೇಕ ಅನುಕೂಲಗಳಿವೆ. ಈ ಸಂಸ್ಥೆಗಳು ರೈತರ ಧಾನ್ಯಗಳನ್ನು ಗೋದಾಮುಗಳಲ್ಲಿ ಶೇಖರಿಸಿಟ್ಟು ಅವನ್ನು ಸಕಾಲದಲ್ಲಿ ಉತ್ತಮ ಬೆಲೆಗೆ ಮಾರಾಟ ಮಾಡುತ್ತವೆ. ಈ ಮಾರಾಟ ಸಂಸ್ಥೆಗಳಿಂದ ಉತ್ಪಾದನೆಯನ್ನು ಹಿಡಿತದಲ್ಲಿಟ್ಟುಕೊಳ್ಳುವುದರ ಮೂಲಕ ಉತ್ಪನ್ನಗಳ ಮಾರಾಟವನ್ನು ಹೆಚ್ಚಿಸಬಹುದು. ರೈತನು ಒಬ್ಬನೇ ಧಾನ್ಯಗಳನ್ನು ಮಾರುವುದಕ್ಕಿಂತಲೂ ಸಹಕಾರಿ ಮಾರಾಟ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಅವುಗಳ ಮೂಲಕ ಮಾರಾಟ ಮಾಡುವುದರಿಂದ ಹೆಚ್ಚು ಪ್ರಯೋಜನಗಳನ್ನು ಪಡೆಯಬಹುದು. ರೈತನು ತಾನೇ ಮಾರಾಟ ಮಾಡುವಾಗ ಹಲವಾರು ಮೋಸಗಳಿಗೆ ತುತ್ತಾಗುತ್ತಾನೆ. ಆದರೆ ಸಹಕಾರಿ ಮಾರಾಟ ಸಂಸ್ಥೆಗಳಲ್ಲಿ ಕೆಲವಾರು ವ್ಯಕ್ತಿಗಳು ಸೇರಿ ಸಾಮೂ ಹಿಕವಾಗಿ ಧಾನ್ಯಗಳನ್ನು ಮಾರುವುದರಿಂದ ಯಾವ ರೀತಿಯ ಮೋಸಗಳಿಗೂ ಆಸ್ಪದವಿರುವುದಿಲ್ಲ. ರೈತರು ತಮ್ಮ ಉತ್ಪಾದನೆ

ಮನ್ನು ಸಹಕಾರಿ ಸಂಸ್ಥೆಗಳಿಗೆ ಒಪ್ಪಿಸಿದ ನಂತರ ಅದು ಅವರ
ಸ್ವಲ್ಪ ಭಾಗದ ಹಣವನ್ನು ಕೊಡುತ್ತದೆ. ಇದರಿಂದ ರೈತರ
ತಮ್ಮ ತಕ್ಷಣದ ಖರ್ಚುಗಳಿಗೆ ಹಣ ದೊರೆಯುವುದಲ್ಲದ
ಸುಗ್ಗಿಯ ಕಾರ್ಯಕ್ರಮಗಳನ್ನು ಆ ಹಣದಿಂದ ಪೂರೈಸಿಕೋ
ಬಹುದು. ಈ ಕ್ರಮದಿಂದ ಸುಗ್ಗಿಯ ಕಾಲದಲ್ಲೇ ರೈತ
ಧಾನ್ಯಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಿ ನಷ್ಟಹೊಂದ
ವುದು ತಪ್ಪುತ್ತದೆ. ಸಹಕಾರಿ ಸಂಸ್ಥೆಗಳು ಸದಸ್ಯರು ಹಾಗ
ಇತರರಿಂದ ಶೇಖರಿಸಿದ ದವಸಧಾನ್ಯಗಳನ್ನು ದರ್ಜೆವಾ
ವಿಂಗಡಿಸಿ ನ್ಯಾಯ ಬೆಲೆ ಬಂದಾಗ ಮಾರುತ್ತವೆ. ಈ ಸಂಸ್ಥೆಗಳ
ದಲ್ಲಾಲಿ ಹಾಗೂ ಮಾರಾಟದ ಖರ್ಚುಗಳಿರುವುದಿಲ್ಲ. ಮಾರಾ
ಮಾಡಿ ಬಂದ ಹಣದಲ್ಲಿ ಮೊದಲು ಕೊಟ್ಟಿದ್ದ ಹಣವನ
ಮುರಿದುಕೊಂಡು ಉಳಿದುದನ್ನು ಕೊಡಲಾಗುವುದು. ಈ
ಮಾರಾಟ ಸಂಸ್ಥೆಗಳಿಂದ ಸುಲಭವಾಗಿ ಮತ್ತು ಜಾಗ್ರತೆಯಾ
ಕೃಷಿಯೋತ್ಪನ್ನಗಳ ಸಾಗಾಣಿಕೆಯ ಏರ್ಪಾಡು ಮಾಡಲಾಗ
ತ್ತದೆ. ಸ್ವಂತವಾಗಿ ಕಾಯುವ ಸಾಮರ್ಥ್ಯವನ್ನು ಹೊಂದಿರ
ರೈತರಿಗೆ ಸಹಕಾರಿ ಮಾರಾಟ ಸಂಸ್ಥೆಗಳು ಕಾಯುವ ಸಾಮರ್ಥ್ಯ
ವನ್ನು ಒದಗಿಸುತ್ತವೆ. ಈ ಸಂಸ್ಥೆಗಳಲ್ಲಿ ದುರ್ವ್ಯವಹಾರಕ
ಎಡೆ ಇರುವುದಿಲ್ಲ. ತೂಕ ಮತ್ತು ಅಳತೆಗಳು ಪ್ರಾಮಾಣಿ
ವಾಗಿರುತ್ತವೆ. ಕೃಷಿ ಉತ್ಪಾದನೆಯ ವಸ್ತುಗಳನ್ನು ಮಾರುವ
ಹಾಗೂ ಕೊಳ್ಳುವಲ್ಲಿ ದೇಶದ ಆರ್ಥಿಕ ವಿಕಸನ ಕಾರ್ಯ
ಭದ್ರತರವಾಗಲು ಸಹಕಾರಿ ಮಾರಾಟ ಸಂಸ್ಥೆಗಳು ಕಾರಣ
ವಾಗಿವೆ. ಕೇವಲ ಮಾರಾಟ ಮಾಡಿ ಲಾಭಗಳಿಸುವುದು ಈ
ಸಂಸ್ಥೆಗಳ ಗುರಿಯಲ್ಲ. ಬೆಲೆಗಳನ್ನು ನಿಯಂತ್ರಿಸುವುದು
ಆಹಾರಧಾನ್ಯಗಳನ್ನು ಸರಿಯಾಗಿ ಹಂಚುವುದು, ದಲ್ಲಾಲಿಗ

ಶೋಷಣೆಯನ್ನು ತಡೆಗಟ್ಟುವುದು, ರೈತರ ಸಮಸ್ಯೆಗಳನ್ನು ನಿವಾರಿಸುವುದು, ಉತ್ಪಾದಕರಿಗೆ ಮತ್ತು ಗ್ರಾಹಕರಿಗೆ ಯೋಗ್ಯ ಬೆಲೆ ದೊರಕಿಸಿಕೊಡುವುದು ಮುಂತಾದ ಸತ್ಕಾರ್ಯಗಳನ್ನು ಸಾಧಿಸುವುದೇ ಸಹಕಾರಿ ಮಾರಾಟ ಸಂಸ್ಥೆಗಳ ಹೆಗ್ಗುರಿಯಾಗಿದೆ. ಸಹಕಾರಿ ಮಾರಾಟ ಸಂಸ್ಥೆಗಳು ವಸ್ತುಗಳ ಮಾರಾಟದಲ್ಲಿ ಸ್ಪರ್ಧೆಯನ್ನು ಹೋಗಲಾಡಿಸಿ ವಸ್ತುಗಳನ್ನು ಕೊಂಡುಕೊಳ್ಳುವುದರಲ್ಲಿ ಸ್ಪರ್ಧೆಯನ್ನು ರೂಪಿಸುತ್ತವೆ. ಖಾಸಗೀ ವರ್ತಕರ ಬಳಿಯು ಲ್ಲಾಗಲೀ ಅಥವಾ ಮಾರುಕಟ್ಟೆಗಳಲ್ಲಾಗಲೀ ಸರಕುಗಳನ್ನು ಮಾರಾಟ ಮಾಡುವಾಗ ಮಾರುವವರಿಗೆ ಭೇದಭಾವಗಳನ್ನು ತೋರಿಸುವುದುಂಟು. ಆದರೆ ಸಹಕಾರಿ ಮಾರಾಟ ಸಂಸ್ಥೆಗಳು ಸಮಾನತೆಯ ಸಹಕಾರದ ಮನೋಭಾವವನ್ನು ಹೊಂದಿದ್ದು ಎಲ್ಲರನ್ನೂ ಒಂದೇ ದೃಷ್ಟಿಯಲ್ಲಿ ನೋಡುತ್ತವೆ. ಇದರಿಂದಾಗಿ ಈ ಸಂಸ್ಥೆಗಳಲ್ಲಿ ಮಾರಾಟದಲ್ಲಿ ಸ್ಪರ್ಧೆಗೆ ಅವಕಾಶವಿರುವುದಿಲ್ಲ. ಸಹಕಾರ ಸಂಸ್ಥೆಗಳಲ್ಲಿ ಮಾರಾಟವು ಸುವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿದ್ದು ಯಾವುದೇ ರೀತಿಯ ಮೋಸಕ್ಕೆ ಆಸ್ಪದವಿರುವುದಿಲ್ಲ. ಇದರಿಂದ ಗ್ರಾಹಕರಿಗೆ ಉತ್ತಮ ಗುಣಾಂಶಗಳಿಂದ ಕೂಡಿದ ಆಹಾರಧಾನ್ಯಗಳು ಸರಿಯಾದ ತೂಕದಲ್ಲಿ ನ್ಯಾಯ ಬೆಲೆಗೆ ದೊರೆಯುತ್ತವೆಂಬ ನಂಬಿಕೆ ಹುಟ್ಟಿ ಅಧಿಕ ಸಂಖ್ಯೆಯಲ್ಲಿ ಧಾನ್ಯಗಳನ್ನು ಕೊಳ್ಳಲು ಸಹಕಾರಿ ಮಾರಾಟ ಸಂಸ್ಥೆಗಳಿಗೆ ಬರು ತ್ತಾರೆ. ಈ ರೀತಿ ಈ ಸಂಸ್ಥೆಗಳು ಆಹಾರಧಾನ್ಯಗಳ ಕೊಂಡು ಕೊಳ್ಳುವಿಕೆಯಲ್ಲಿ ಸ್ಪರ್ಧೆಯನ್ನುಂಟುಮಾಡುತ್ತವೆ. ಸಹಕಾರಿ ಮಾರಾಟ ಸಂಸ್ಥೆಗಳ ಮೂಲಕ ರೈತರ ಸರಕುಗಳನ್ನು ಮಾರಾಟ ಮಾಡಿದರೆ ಸಹಕಾರ ಸಂಸ್ಥೆಗಳಿಂದ ನೀಡಿದ ಸಾಲದ ವಸೂಲಾತಿಯು ಸುಲಭವಾಗುತ್ತದೆ. ಈ ಸೌಲಭ್ಯಗಳ ಜೊತೆಗೆ

ಸಹಕಾರಿ ಮಾರಾಟ ಸಂಸ್ಥೆಗಳು ರೈತರಿಗೆ ಉತ್ತಮ ಬೀಜಗಳ
ಗೊಬ್ಬರ, ನೇಗಿಲು ಇತ್ಯಾದಿ ಉಪಕರಣಗಳನ್ನು ನ್ಯಾಯ ಬೆಲ
ಕೊಡುತ್ತವೆ. ಇದಲ್ಲದೆ ಅತ್ಯಾಧುನಿಕ ಯಂತ್ರಗಳ ಉಪಯೋ
ಪರಿಶೋಧನೆಗಳ ಪ್ರಯೋಜನಗಳನ್ನು ಸಹ ರೈತರಿಗೆ ಒದಗಿ
ತ್ತವೆ.

ಈ ರೀತಿ ಸಹಕಾರಿ ಮಾರಾಟ ಸಂಸ್ಥೆಗಳಿಂದ ಅನೇಕ ಲಾ
ಗಳಿವೆ. ಕೃಷಿಯೇ ಮುಖ್ಯ ಕಸುಬಾಗಿ ಅವಲಂಬಿಸಿರುವ ನಮ
ರೈತರು ಉತ್ಪಾದನಾ ಯಂತ್ರಗಳಾಗಿ ದುಡಿದು ಆ ವಸ್ತುಗಳನ
ಸರಿಯಾದ ಬೆಲೆಗೆ ಮಾರಾಟ ಸಂಸ್ಥೆಗಳಲ್ಲಿ ಮಾರದೆ, ಮ
ವರ್ತಿಗಳಿಗೆ ಮಾರಿದರೆ ರಾಷ್ಟ್ರದ ಆದಾಯ ಹೆಚ್ಚುವುದಿ
ರೈತರು ಕೃಷಿಗೆ ಆಗತ್ಯವಾದ ಸಲಕರಣೆಗಳನ್ನು ಕೊಳ್ಳ
ಹಣದ ಅಭಾವವಿರುವುದರಿಂದ ಕಷ್ಟಪಟ್ಟು ದುಡಿಯುವುದಿ
ಸರಿಯಾದ ಮಾರಾಟ ಸಂಸ್ಥೆಗಳ ವ್ಯವಸ್ಥೆಯಿದ್ದರೆ ಲಾ
ಪಡೆಯುವ ಆಸೆಯಿಂದ ರೈತರು ತಮ್ಮ ಶ್ರಮ ಮತ್ತು ಕಾಲ
ಬಹು ಭಾಗವನ್ನು ಕೃಷಿ ಉತ್ಪಾದನೆಗೆ ಮೀಸಲಾಗಿಡುತ್ತಾ
ಉತ್ಪಾದನೆಯಲ್ಲಿ ಸ್ವಲ್ಪ ಭಾಗವನ್ನು ಮಾರುತ್ತಾರೆ, ಅನಂ
ತಾವು ಪಡೆದ ಸಾಲವನ್ನು ಹಿಂತಿರುಗಿಸುತ್ತಾರೆ. ಈ ವ್ಯ
ಯಿಂದ ಸಹಕಾರಿ ಮಾರಾಟ ಸಂಸ್ಥೆಗಳ ಸೇವೆ ನಿಜಕ
ಅಮೋಘವಾದುದು. ಈ ಸಂಸ್ಥೆಗಳು ಮಾರುಕಟ್ಟೆಗಳ
ದುರ್ಲಭವಾಗಿರುವ ಅನೇಕ ಸೌಲಭ್ಯಗಳನ್ನು ಹೊಂದಿರುವು
ರಿಂದಲೂ, ಸರಕುಗಳಿಗೆ ಯೋಗ್ಯ ಬೆಲೆ ದೊರಕಿಸಿ ಕೊಡುವು
ರಿಂದಲೂ ರೈತರಿಗೆ ಈ ಸಂಸ್ಥೆಗಳ ಬಗ್ಗೆ ವಿಶ್ವಾಸಮೂಡಿ ಅವ
ಹೆಚ್ಚು ಉತ್ಸಾಹದಿಂದ ಅಧಿಕ ಪ್ರಮಾಣದಲ್ಲಿ ಧಾನ್ಯಗಳನ
ಬೆಳೆಯುವರು. ಈ ರೀತಿ ಕೃಷಿಯ ಉತ್ಪಾದನೆ ಹೆಚ್ಚುತ್ತ

ಐತ್ತೀಚಿಗೆ ಭಾರತದಲ್ಲಿ ಸಹಕಾರಿ ಮಾರಾಟದ ಅಭಿವೃದ್ಧಿಗೆ ವಿಶೇಷ ಗಮನ ಕೊಡಲಾಗಿದೆ. ಎಲ್ಲಾ ಮಟ್ಟಗಳಲ್ಲಿಯೂ ಸಹಕಾರಿ ಮಾರಾಟ ಸಂಸ್ಥೆಗಳು ರೂಪುಗೊಂಡಿದ್ದು ವ್ಯವಹಾರ ದಲ್ಲಿ ತೊಡಗಿವೆ. ಉತ್ಪಾದಕರ ಸಂಪೂರ್ಣ ಯೋಗಕ್ಷೇಮ ವನ್ನು ನೋಡಿಕೊಳ್ಳುವುದು ಈ ಸಂಸ್ಥೆಗಳ ಮುಖ್ಯ ಧ್ಯೇಯ ವಾಗಿರುವುದು ನಿಜಕ್ಕೂ ರೈತರ ಪುಣ್ಯವಿಶೇಷವೆನ್ನಬೇಕು.

**ಸಾಲ ಮತ್ತು ಮಾರಾಟ ಜೋಡಣೆ :**
**(Linking of credit with marketing)**

ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಅಲ್ಪಾವಧಿ, ಮಧ್ಯ ಮಾವಧಿ ಹಾಗೂ ದೀರ್ಘಾವಧಿಯ ಸಾಲಗಳು ಹಲವಾರು ಕಾರಣಗಳಿಂದ ಸಕಾಲದಲ್ಲಿ ಹಿಂತಿರುಗಿ ಬರುವುದಿಲ್ಲ. ಈ ಸಮಸ್ಯೆಯ ಪರಿಹಾರಕ್ಕೆ ಸಾಲ ಮತ್ತು ಮಾರಾಟ ವ್ಯವಸ್ಥೆಯ ಜೋಡಣೆಯು ಅತ್ಯಾವಶ್ಯಕ. ಸಾಲ ಕೊಡುವ ಸಹಕಾರ ಸಂಸ್ಥೆ ಗಳು ತಮ್ಮ ಸದಸ್ಯರು ಬೆಳೆದ ಬೆಳೆಯನ್ನು ಸಹಕಾರಿ ಮಾರಾಟ ಸಂಸ್ಥೆಗಳ ಮೂಲಕ ಮಾರಾಟ ಮಾಡುವ ವ್ಯವಸ್ಥೆ ಮಾಡಬೇಕು. ಇದರಿಂದ ರೈತರಿಗೆ ತಮ್ಮ ಉತ್ಪತ್ತಿಗೆ ಮತ್ತು ತಮ್ಮ ಶ್ರಮಕ್ಕೆ ಯೋಗ್ಯ ಬೆಲೆ ಸಿಗುವುದಲ್ಲದೆ, ಬೆಳೆ ಸಾಲದ ತತ್ವವನ್ನು ಪಾಲಿಸಿ ದಂತಾಗುತ್ತದೆ. ಅಲ್ಲದೆ ಸಹಕಾರಿ ಸಂಸ್ಥೆಗಳು ರೈತರಿಗೆ ಕೊಟ್ಟ ಸಾಲವು ಹಿಂತಿರುಗಿ ಬಂದಂತಾಗುತ್ತದೆ. ಮೊದಲಿಗೆ ಸಹಕಾರಿ ಸಾಲವು ನಮ್ಮಲ್ಲಿ ರೂಪುಗೊಂಡಿತು. ಸಹಕಾರಿ ಸಾಲ ಚಳುವಳಿ ಪ್ರಾರಂಭವಾದ ಅನೇಕ ವರ್ಷಗಳ ನಂತರ ಅನುಷ್ಠಾನಕ್ಕೆ ಬಂದಿತು. ಸಾಲ ಮತ್ತು ಮಾರಾಟ ಜೋಡಣೆ ಮಾಡುವುದರ ಮುಖ್ಯ ಉದ್ದೇಶವೆಂದರೆ ಹೆಚ್ಚಿನ ಉತ್ಪಾದನೆಯನ್ನು ಸಹಕಾರಿ

ಮಾರಾಟ ಸಂಸ್ಥೆಗಳ ಮೂಲಕ ಮಾರಾಟ ಮಾಡಿ ಸರಿಯಾ
ಬೆಲೆಯು ರೈತರಿಗೆ ಸಿಗುವಂತೆ ಮಾಡುವುದರಿಂದ ಸಹಕಾ
ಸಂಸ್ಥೆಗಳು ಕೊಟ್ಟ ಸಾಲವನ್ನು ಸುಲಭವಾಗಿ ಹಿಂದಕ್ಕೆ ಪಡೆ
ಬಹುದು ಎಂಬುದು. ಈ ಬೃಹತ್ ಯೋಜನೆಯೇ ಸಾ
ಮಾರಾಟ ಜೋಡಣೆ. ಈ ಉದ್ದೇಶವನ್ನು ಸಾಧಿಸಬೇಕಾ
ಪ್ರಾಥಮಿಕ ಸಹಕಾರಿ ಸಂಸ್ಥೆ ಮತ್ತು ಮಾರಾಟ ಸಂಸ್ಥೆಗಳ
ನಿಕಟ ಸಂಬಂಧ ಇರಬೇಕಾದುದು ಅವಶ್ಯಕ. ಆದ್ದರಿಂದ ಎಲ
ಪ್ರಾಥಮಿಕ ಸಹಕಾರಿ ಸಂಸ್ಥೆಗಳು ಮಾರಾಟ ಸಂಸ್ಥೆಗಳ ಸದಸ್ಯ
ಹೊಂದಿರಬೇಕು. ಇದಲ್ಲದೆ ಮಾರಾಟ ಸಂಸ್ಥೆಗಳಲ್ಲಿ ಧಾನ್ಯಗ
ಸಂಗ್ರಹಣೆ ಹಾಗೂ ಮಾರಾಟಕ್ಕೆ ತಕ್ಕ ವ್ಯವಸ್ಥೆ ಇರಬೇಕು.
ಯೋಜನೆಯು ಪೂರ್ಣವಾಗಿ ಕಾರ್ಯರೂಪಕ್ಕಿಳಿದರೆ ಉತ್ಪಾ
ಕರ ದೈವವು ತೆರೆದಂತಾಗುವುದು. ರೈತರು ಮಾರಲು ತ
ಮಾಲಿನ ಪರೀಕ್ಷೆಯಾಗಿ ಅವರ ಸರಕುಗಳಿಗೆ ಯೋಗ್ಯ ಬೆ
ಸಿಕ್ಕಿದರೆ, ನಿಶ್ಚಿಂತೆಯಿಂದ ಉತ್ಪಾದನಾ ಕಾರ್ಯದಲ್ಲಿ ಉತ್ಸಾ
ದಿಂದ ತೊಡಗುವರು. ಆದ್ದರಿಂದ ಸಾಲ ಮತ್ತು ಮಾರಾ
ಜೋಡಣೆಯು ತೀವ್ರವೇಗದಿಂದ ಸಾಗಲು ಎಲ್ಲಾ ಕಾಯ
ಗಳನ್ನು ನಿರ್ವಹಿಸುವಂತೆ ಮಾಡುವುದು ಸರಕಾರದ ಕರ್ತ
ವಾಗಿದೆ. ಸಾಲ ಮತ್ತು ಮಾರಾಟ ಜೋಡಣೆಯು ಬಲವತ್ತ
ಗೊಳ್ಳಬೇಕು. ಈ ಸಾರ್ವತ್ರಿಕ ತಿಳುವಳಿಕೆಯನ್ನು ಮೂಡಿಸ
ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ಈ ಮಹತ್ವದ ಪಾ
ವಹಿಸಬೇಕು. ಕೃಷಿ ಸಾಲ ಕ್ಷೇತ್ರದ ಸಂಸ್ಥೆಗಳು ಮತ
ಮಾರಾಟ ಸಂಸ್ಥೆಗಳು ಅಗತ್ಯದ ಕ್ರಮಗಳನ್ನು ಕೈಗೊಳ್ಳಬೇಕು

ನಮ್ಮ ದೇಶದಲ್ಲಿ ಮಾರಾಟ ಪದ್ಧತಿಯು ವಿಕಸಿತಗೊಳ
ತ್ತಿದ್ದರೂ ಸಹ ರೈತರು ಇನ್ನೂ ಮೂಢನಂಬಿಕೆಗಳನ್ನು ಬಿಟ್ಟಿ

ಅಲ್ಲದೆ ಅವರು ಅವಿದ್ಯಾವಂತರಿರುವುದರಿಂದ ಸಹಕಾರಿ ಮಾರಾಟ ಸಂಸ್ಥೆಗಳ ಮಹತ್ವ ಅವರಿಗೆ ತಿಳಿಯುವುದು ಕಷ್ಟ. ಆದ್ದರಿಂದ ಚಲನಚಿತ್ರ ಪ್ರದರ್ಶನಗಳ ಮೂಲಕ ಸಹಕಾರಿ ಮಾರಾಟದ ಮಹತ್ವವನ್ನು ತಿಳಿಯಪಡಿಸಿದರೆ ರೈತರ ಗಮನ ಸೆಳೆಯಲು ಸಾಧ್ಯವಾಗುವುದು ಮತ್ತು ಸಹಕಾರಿ ಸಂಸ್ಥೆಗಳು ರೈತರಿಗೆ ಅವಶ್ಯಕತೆ ಬಿದ್ದಾಗ ಸಾಲವನ್ನು ಒದಗಿಸಿ, ಅನಂತರ ಆ ಸಾಲವನ್ನು ಸಾಲ ಮತ್ತು ಮಾರಾಟ ಜೋಡಣೆಯಿಂದ ಸುಲಭವಾಗಿ ಮರುಪಾವತಿಮಾಡಿಕೊಳ್ಳಲು ಅನುಕೂಲವಾಗುತ್ತವೆ.

## ಸಹಕಾರ ಮತ್ತು ಯೋಜನೆಗಳು

ಭಾರತವು ಬ್ರಿಟಿಷರ ಗುಲಾಮಗಿರಿಯಿಂದ ಬಿಡುಗಡೆ ಹೊಂದಿ ಸ್ವಾತಂತ್ರ್ಯದ ಜಯಮಾಲೆ ಧರಿಸಿ ತನ್ನ ಚರಿತ್ರೆಯಲ್ಲಿ ಒಂದು ಅಧ್ಯಾಯವನ್ನು ಪರಿಸಮಾಪ್ತಿಗೊಳಿಸಿ ಮತ್ತೊಂದು ಅಧ್ಯಾಯವನ್ನು ತೆರೆಯಿತು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೂಡಿದ ಚಳುವಳಿಯು ಮುಕ್ತಾಯಗೊಂಡು ಅದರೊಂದಿಗೆ ಆದರ್ಶ ಸಮಾಜವನ್ನು ಸ್ಥಾಪಿಸಲು, ರಾಷ್ಟ್ರೀಯ ಅಭಿವೃದ್ಧಿಯನ್ನು ಹೊಂದಲು 1950ರಲ್ಲಿ ಪಂಚವಾರ್ಷಿಕ ಯೋಜನೆಗಳೆಂಬ ಮಹತ್ಕಾರ್ಯವು ಆರಂಭಗೊಂಡು ಭಾರತದ ಆರ್ಥಿಕ ಸ್ವಾತಂತ್ರ್ಯ ಸಾಧನೆಗೆ ಕೈಹಾಕಿತು. ದೇಶವು ಆರ್ಥಿಕ ಪ್ರಗತಿಯನ್ನು ಹೊಂದಿ ಸುಖ, ಸಮೃದ್ಧಿಗಳಿಂದ ಕೂಡಿದ ಕಲ್ಯಾಣ ರಾಷ್ಟ್ರವಾಗಿ ಪರಿವರ್ತನೆಗೊಳ್ಳಬೇಕೆಂಬ ಆಸೆ-ಆಕಾಂಕ್ಷೆಗಳಿಂದ ಈ ಯೋಜನೆಗಳಲ್ಲಿ ಸಹಕಾರವನ್ನು ಪೂರಕವಾಗಿ ತೆಗೆದುಕೊಳ್ಳಲು ನಿಶ್ಚಯಿಸಲಾಯಿತು. ಅದರಂತೆ ಸ್ವಾತಂತ್ರ್ಯಾನಂತರ ಸಹಕಾರ ಸಂಸ್ಥೆಗಳ ಕ್ಷೇತ್ರವು ವಿಸ್ತಾರ ಹೊಂದಿತು. ಆರ್ಥಿಕ ಯೋಜನೆಯ ಮುಖ್ಯ

ಉದ್ದೇಶ ಜನಸಾಮಾನ್ಯರ ಬೇಡಿಕೆಗಳನ್ನು ಪೂರೈಸಿ, ಆರ್ಥಿಕ ಬೆಳವಣಿಗೆಗೆ ಅನುಕೂಲ ವಾತಾವರಣ ಕಲ್ಪಿಸುವುದು. ಸಹಕಾರಿ ತತ್ವಗಳ ಆಧಾರದ ಮೇಲೆ ರಚಿತವಾಗಿರುವ ಸಮಾಜವು ನಮ್ಮ ಸಂವಿಧಾನದ ಮಾರ್ಗಾನುಸರಣೆಯ ಒಂದು ಗುರಿಯಾಗಿದೆ. ಪ್ರಜಾಪ್ರಭುತ್ವದ ಈ ಹಿನ್ನೆಲೆಯಲ್ಲಿ ರಚಿತವಾಗಿರುವ ಯೋಜನೆಗಳಿಗೆ ಸಹಕಾರವು ಮೂಲಾಧಾರವಾಗಿದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಸಹಕಾರದ ಕಾರ್ಯಕ್ರಮಗಳಿಗೆ ವಿಶೇಷಗಮನ ಕೊಡಲಾಗಿದೆ.

**ಪ್ರಥಮ ಪಂಚವಾರ್ಷಿಕ ಯೋಜನೆ** : ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ಉತ್ಪನ್ನವನ್ನು ಹೆಚ್ಚಿಸುವುದು, ಸದಸ್ಯರಿಗೆ ಸಾಲ ಕೊಡುವುದು, ಆಹಾರ ಧಾನ್ಯಗಳ ಮಾರಾಟ, ಇವೇ ಮುಂತಾದ ಕಾರ್ಯಗಳನ್ನು ಹಳ್ಳಿಗಾಡಿನ ಪ್ರಾಥಮಿಕ ಸಹಕಾರ ಸಂಸ್ಥೆಗಳು ಕೈಗೊಂಡವು. ಈ ಯೋಜನೆಯಲ್ಲಿ ಮುಖ್ಯವಾಗಿ ರೈತರಲ್ಲಿ ಸುಧಾರಿತ ಸಾಲ ಮತ್ತು ಮಾರುಕಟ್ಟೆಯ ಸೌಲಭ್ಯಗಳನ್ನು ಒದಗಿಸುವುದಕ್ಕೆ ಪ್ರೋತ್ಸಾಹ ನೀಡಲಾಯಿತು. ಈ ಯೋಜನೆಯಲ್ಲಿ ಕೃಷಿಯ ಅಭಿವೃದ್ಧಿಗೆ ವಿಶೇಷ ಆದ್ಯತೆಯನ್ನು ನೀಡಲಾಯಿತು. ಗ್ರಾಮಾಂತರ ಪ್ರದೇಶಗಳಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಕ್ರಾಂತಿಯನ್ನೆಬ್ಬಿಸಿ ಜನರನ್ನು ಹಾಗೂ ಪ್ರದೇಶಗಳನ್ನು ಉತ್ತಮಮಟ್ಟಕ್ಕೆ ತರಲು ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಈ ಸಂಸ್ಥೆಗಳಿಂದ ಕೃಷಿ ಸಲಕರಣೆಗಳನ್ನು ಸಾಲದ ರೂಪದಲ್ಲಿ ಸುಲಭ ಬೆಲೆಗೆ ರೈತರಿಗೆ ಒದಗಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಭಾರತದ ಶೇಕಡ 50ರಷ್ಟು ಹಳ್ಳಿಗಳು ಮತ್ತು ಶೇಕಡ 30ರಷ್ಟು ಗ್ರಾಮೀಣ ಜನರನ್ನು ಸಹಕಾರದ ಕಕ್ಷೆಯಲ್ಲಿ ಬರಮಾಡಿಕೊಳ್ಳುವ ಮತ್ತು ಪ್ರತಿವರ್ಷ

135 ಕೋಟಿ ರೂ. ಸಾಲ ನೀಡುವ ಗುರಿಯನ್ನಿಟ್ಟುಕೊಳ್ಳಲು ಈ ಯೋಜನೆಯು ಶಿಫಾರಸು ಮಾಡಿದ್ದಿತು. ಈ ಯೋಜನಾವಧಿಯಲ್ಲಿ ಸಹಕಾರ ಸಂಸ್ಥೆಗಳು ನೀಡಿದ ಸಾಲದ ಮೊತ್ತ 53ಕೋಟಿ ರೂ.ಗಳಾದರೆ, ರಾಜ್ಯಸರ್ಕಾರಗಳು ನೀಡಿದ ಸಾಲದ ಮೊತ್ತ 27ಕೋಟಿ ರೂ.ಗಳಾಗಿದ್ದಿತು. ಈ ಯೋಜನೆಯಲ್ಲಿ ಸಹಕಾರವು ಹೆಚ್ಚು ಪ್ರಗತಿಯನ್ನು ಸಾಧಿಸಲಿಲ್ಲವೆಂದು ಹೇಳಬಹುದು. ಇದಕ್ಕೆ ಕಾರಣ ಸಹಕಾರ ಕಾರ್ಯಕರ್ತರು ಹಾಗೂ ಕೇಂದ್ರ ಮತ್ತು ರಾಜ್ಯ ಸರಕಾರಗಳ ಉದಾಸೀನತೆ.

ದ್ವಿತೀಯ ಯೋಜನೆ: ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಸಹಕಾರಾಭಿವೃದ್ಧಿಗಾಗಿ ಅನೇಕ ರೀತಿಯ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು. ಸಹಕಾರದ ಬೆಳವಣಿಗೆಗಾಗಿ 34ಕೋಟಿ ರೂ.ಗಳನ್ನು ಮೀಸಲಾಗಿಟ್ಟು ವೆಚ್ಚಮಾಡಲಾಯಿತು. ಕೇಂದ್ರ ಸರಕಾರ ರಾಷ್ಟ್ರೀಯ ಸಹಕಾರ ವಿಕಾಸ ನಿಧಿಯನ್ನು ಸ್ಥಾಪಿಸಿತು. ಈ ನಿಧಿಯಿಂದ ರಾಜ್ಯಸರಕಾರಗಳು ಸಾಲ ತೆಗೆದುಕೊಂಡು ಅದನ್ನು ಪತ್ತುರಹಿತ ಸಂಸ್ಥೆಗಳ ಬಂಡವಾಳದಲ್ಲಿ ತೊಡಗಿಸಲು ಅನುಕೂಲವಾಯಿತು. ಈ ಯೋಜನಾವಧಿಯಲ್ಲಿ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲಗಳ ಗುರಿ ಕ್ರಮವಾಗಿ 150ಕೋಟಿರೂ. ಮತ್ತು 25ಕೋಟಿರೂ.ಗಳು ಇದ್ದಿತು. ಈ ಅವಧಿಯಲ್ಲಿ ಸ್ಥಾಪಿಸಬೇಕಾಗಿದ್ದ ಮಾರಾಟ ಸಂಸ್ಥೆಗಳ ಸಂಖ್ಯೆ 1800, ಸಹಕಾರಿ ಸಕ್ಕರೆ ಕಾರ್ಖಾನೆಗಳು 35, ಕೇಂದ್ರ ಮತ್ತು ರಾಜ್ಯ ಸರಕಾರಗಳ ಮಾರುಕಟ್ಟೆಗಳು 350 ಹಾಗೂ ಮಾರಾಟ ಸಂಸ್ಥೆಗಳ ಉಗ್ರಾಣಗಳು 1500. ಈ ಗುರಿಗಳ ಜೊತೆಗೆ ಉತ್ಪಾದಕ ಹಾಗೂ ಇತರ ಸಹಕಾರಿ ಸಂಸ್ಥೆಗಳ ಅಭಿವೃದ್ಧಿ ಕಾರ್ಯಕ್ರಮಗಳ ವಿಷಯವಾಗಿ ವಿಶಿಷ್ಟ

ಗುರಿಗಳನ್ನಿಟ್ಟುಕೊಳ್ಳಲಾಯಿತು. ಸುವ್ಯವಸ್ಥಿತ ಆಡಳಿತಕ್ಕಾಗಿ ಪುಣೆ, ರಾಂಚಿ, ಮದರಾಸುಗಳಲ್ಲಿ ಸಹಕಾರಿ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಯಿತು. 1958–59ರ ವೇಳೆಗೆ ಸಹಕಾರಿ ಕ್ಷೇತ್ರದಲ್ಲಿ 2.74ಕೋಟಿ ಜನ ಸದಸ್ಯರು ಮತ್ತು 879 ಕೋಟಿ ರೂ. ಬಂಡವಾಳ ಹೊಂದಿದ್ದ 283,971 ಸಂಘಗಳು ಕೆಲಸ ಮಾಡುತ್ತಿದ್ದವು. ಈ ಅವಧಿಯಲ್ಲಿ ಸಹಕಾರಾಭಿವೃದ್ಧಿಯಲ್ಲಿ ಅನೇಕ ಬದಲಾವಣೆಗಳು ಕಂಡು ಬಂದರೂ ಅವು ಏಕರೂಪವಾಗಿರಲಿಲ್ಲ.

ತೃತೀಯ ಪಂಚವಾರ್ಷಿಕ ಯೋಜನೆ: ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಜಾಸತ್ತಾತ್ಮಕವಾದ ಸಮಾಜವಾದಿ ಸಮಾಜ ರಚನೆಯ ದೃಷ್ಟಿಯಿಂದ ಸಹಕಾರಿ ರಂಗದ ಶೀಘ್ರ ಬೆಳವಣಿಗೆಗಾಗಿ ಹೆಚ್ಚಿನ ಪ್ರಾಧಾನ್ಯತೆ ನೀಡಲಾಯಿತು. ಅಭಿವೃದ್ಧಿ ಕಾರ್ಯಗಳ ಯಶಸ್ಸಿಗೆ ಸಹಕಾರವು ಮುಖ್ಯ ಸಾಧನವೆಂಬುದು ಈ ಯೋಜನೆಯಲ್ಲಿ ಎಲ್ಲರಿಗೂ ಮನವರಿಕೆಯಾಯಿತು. ಹೀಗೆ ಈ ಯೋಜನೆಯು ಸಮಾಜ ವಿಕಾಸ ಕಾರ್ಯಗಳಲ್ಲಿ ಸಹಕಾರಿ ಸಂಸ್ಥೆಗಳು ಮಹತ್ವದ ಪಾತ್ರವಹಿಸಬೇಕೆಂಬುದು ಸ್ಪಷ್ಟಪಡಿಸಿತು. ಈ ಯೋಜನೆಯಲ್ಲಿ ಸಹಕಾರದ ಅಭಿವೃದ್ಧಿಗೆ 80 ಕೋಟಿ ರೂ.ಗಳನ್ನು ವೆಚ್ಚಮಾಡಲಾಯಿತು. ಈ ಮೊತ್ತವು ದ್ವಿತೀಯ ಯೋಜನೆಯಲ್ಲಿ ವೆಚ್ಚಮಾಡಿದ ಮೊತ್ತದ ಎರಡರಷ್ಟಕ್ಕಿಂತಲೂ ಹೆಚ್ಚಿನದಾಗಿದೆ. 1958ರಲ್ಲಿ ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯು ಸಹಕಾರ ಸಂಬಂಧವಾಗಿ ಧೋರಣೆಯೊಂದನ್ನು ರೂಪಿಸಿತು. ಈ ಧೋರಣೆಯ ಪ್ರಕಾರ ಗ್ರಾಮಗಳಲ್ಲಿಯ ಅಭಿವೃದ್ಧಿಕಾರ್ಯಗಳನ್ನು ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು ಸಹಕಾರ ಸಂಸ್ಥೆಗಳು ಮತ್ತು ಗ್ರಾಮಪಂಚಾಯಿತಿಗಳು

ವಹಿಸಿಕೊಂಡವು. ಸಹಕಾರ ಸಂಸ್ಥೆಗಳು ಈ ಅವಧಿಯಲ್ಲಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಸಹಕಾರಿ ಬೇಸಾಯಕ್ಕೆ ಆದ್ಯತೆ ನೀಡಲಾಯಿತು. 320 ಪ್ರಾಯೋಗಿಕ ಸಹಕಾರಿ ಬೇಸಾಯ ಸಂಸ್ಥೆಗಳನ್ನು ಸ್ಥಾಪಿಸಲು ನಿಶ್ಚಯಿಸಲಾಗಿದ್ದು, ಅದರಲ್ಲಿ ಅರ್ಧದಷ್ಟು ಮಾತ್ರ ಸ್ಥಾಪಿಸಲಾಯಿತು. 1960–61 ರಲ್ಲಿ 30,000 ಔದ್ಯೋಗಿಕ ಸಹಕಾರಿ ಸಂಸ್ಥೆಗಳಿದ್ದವು. 1965 –66 ರಲ್ಲಿ ಈ ಸಂಖ್ಯೆಯು 40,000ಕ್ಕೆ ಹೆಚ್ಚಿತು. ಆದರೆ ಅನೇಕ ಕಾರಣಗಳಿಂದಾಗಿ ಈ ಯೋಜನೆಯು ನಿರೀಕ್ಷಿಸಿದ ಗುರಿಗಳನ್ನು ತಲುಪಲಿಲ್ಲ. ಆದ್ದರಿಂದ ಹತಾಶರಾದ ಯೋಜಕರು ನಾಲ್ಕನೆಯ ಯೋಜನೆಗೆ ಬದಲಾಗಿ ಮೂರು ವಾರ್ಷಿಕಯೋಜನೆಗಳನ್ನು ಅನುಷ್ಠಾನಕ್ಕೆ ತಂದರು. ವಾರ್ಷಿಕ ಯೋಜನೆಗಳಲ್ಲಿ ಸಹಕಾರಿ ಸಂಸ್ಥೆಗಳು ಕೃಷಿ ಅಭಿವೃದ್ಧಿಗೆ 159 ಕೋಟಿ ರೂ. ಗಳನ್ನು ವೆಚ್ಚಮಾಡಿದವು ಮತ್ತು ಈ ಅವಧಿಯಲ್ಲಿ 85 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಹೆಚ್ಚು ಇಳುವರಿ ತಳಿ ಕೊಡುವ ಬೆಳೆಗಳನ್ನು ಬೆಳೆಯಲಾಗಿತ್ತು.

ನಾಲ್ಕನೆಯ ಯೋಜನೆ: ನಾಲ್ಕನೆಯ ಪಂಚವಾರ್ಷಿಕ ಯೋಜನೆಯು 1969ರ ಏಪ್ರಿಲ್ ಒಂದರಿಂದ ಕಾರ್ಯರೂಪಕ್ಕೆ ಬಂದಿತು. ಈ ಯೋಜನೆಯಲ್ಲಿ ಕೃಷಿಗೆ ಹೆಚ್ಚು ಮಹತ್ವ ಕೊಟ್ಟಿರುವುದರಿಂದ ಈ ಯೋಜನೆಯನ್ನು 'ಕೃಷಿಯೋಜನೆ' ಎಂದು ಕರೆಯಬಹುದು. ಈ ಯೋಜನೆಯಲ್ಲಿ 4017 ಕೋಟಿ ರೂ.ಗಳನ್ನು ಕೃಷಿಗೆ, 964 ಕೋಟಿ ರೂ. ನೀರಾವರಿ ಹಾಗೂ ವಿದ್ಯುಚ್ಛಕ್ತಿಗೆ ಮತ್ತು ಸಹಕಾರ ಕಾರ್ಯಗಳಿಗೆ 650 ಕೋಟಿ ರೂ.ಗಳನ್ನು ವೆಚ್ಚಮಾಡಲು ನಿರ್ಧರಿಸಲಾಗಿದೆ. ಈ ಯೋಜನಾವಧಿಯಲ್ಲಿ ಸಹಕಾರ ಸಂಸ್ಥೆಗಳು ಮಹತ್ತರವಾದ ಪಾತ್ರವಹಿಸಿ,

ಕೃಷಿ ಕ್ರಾಂತಿಯನ್ನು ಹೂಡಿ, ಯೋಜಕರು ಗೊತ್ತುಪಡಿಸಿರುವ 129 ಮಿಲಿಯನ್ ಟನ್ ಆಹಾರ ಧಾನ್ಯಗಳನ್ನು ಉತ್ಪಾದಿಸಲು ನೆರವಾಗುತ್ತಿವೆ. ಸಾಲ, ಮಾರಾಟ ಸಂಸ್ಥೆಗಳನ್ನು ವಿಸ್ತರಿಸ ಲಾಗುತ್ತಿದೆ. ಕೃಷಿಯ ವಿಸ್ತರಣೆ, ಸಣ್ಣ ರೈತರಿಗೆ ಆದ್ಯತೆ ಇತ್ಯಾದಿ ಕಾರ್ಯಗಳಿಗೆ ಈ ಯೋಜನೆಯಲ್ಲಿ ಹೆಚ್ಚಿನ ಗಮನ ನೀಡಲಾಗುತ್ತಿದೆ. ಉತ್ಪಾದನೆಯನ್ನು ಹೆಚ್ಚಿಸುವ ಉದ್ದೇಶ ದಿಂದ ಸಣ್ಣ ಹೊಲಗಳ ಅಭಿವೃದ್ಧಿಗಾಗಿ ಸಾಕಷ್ಟು ಹಣವನ್ನು ಸಹಕಾರ ಸಂಸ್ಥೆಗಳ ಮೂಲಕ ಒದಗಿಸುವ ಏರ್ಪಾಡನ್ನು ಮಾಡ ಲಾಗುತ್ತಿದೆ. ಈ ಯೋಜನಾವಧಿಯಲ್ಲಿ ಸಹಕಾರ ಸಂಸ್ಥೆಗಳು ಹಾಗೂ ಭೂ ಅಭಿವೃದ್ಧಿ ಬ್ಯಾಂಕುಗಳು ತಮ್ಮ ನಿಯಮಗಳನ್ನು ಸಣ್ಣ ರೈತರಿಗೆ ಅನುಕೂಲವಾಗುವಂತೆ ಬದಲಾಯಿಸಿವೆ. ಸಣ್ಣ ರೈತರಿಗೆ ಬೇಕಾದ ಉಪಕರಣಗಳನ್ನು ಒದಗಿಸಲೆಂದೇ ಸರಕಾರವು 1961 ರಿಂದ ಸಹಕಾರಿ ಬ್ಯಾಂಕುಗಳಿಗೆ ಸಹಾಯಧನ ಕೊಡುತ್ತಾ ಬಂದಿದೆ, 241 ಕೋಟಿ ಹೆಕ್ಟೇರ್ ಭೂಮಿಯಲ್ಲಿ ಹೆಚ್ಚು ಇಳು ವರಿ ಕೊಡುವ ಬೆಳೆಗಳನ್ನು ಬೆಳೆಯಲು ನಿರ್ಧರಿಸಲಾಗಿದೆ.

ಕೇಂದ್ರ ಕೃಷಿ ಶಾಖೆಯ ವರದಿಯಂತೆ 1968–69ರಲ್ಲಿ ಸಹಕಾರಿ ಸಂಸ್ಥೆಗಳು 450 ಕೋಟಿ ರೂ.ಗಳನ್ನು ಆಹಾರದ ಉತ್ಪಾದನೆಗಾಗಿ ಹಂಚಿದ್ದು, 1973–74ರ ಹೊತ್ತಿಗೆ ಸುಮಾರು 900 ಕೋಟಿ ರೂ.ಗಳನ್ನು ಹಂಚುವ ನಿರೀಕ್ಷೆ ಇದೆ. ಅಲ್ಲದೆ ಈ ಹೊತ್ತಿಗೆ ಸಹಕಾರಿ ಸಂಸ್ಥೆಗಳು 650 ಕೋಟಿ ರೂ.ಗಳನ್ನು ಗೊಬ್ಬರ ಹಾಗೂ 115 ಕೋಟಿ ರೂ.ಗಳ ಇತರ ಸಾಮಗ್ರಿ ಗಳನ್ನು ರೈತರಿಗೆ ಹಂಚುವ ಅಂದಾಜಿದೆ. ಹೀಗೆ ಈ ಯೋಜನಾ ವಧಿಯಲ್ಲಿ ಕೃಷಿಯ ಜೊತೆಗೆ ಸಹಕಾರಕ್ಕೂ ಪ್ರಾಧಾನ್ಯತೆ ಕೊಡ ಲಾಗಿದೆ.

ಈ ರೀತಿ ಪ್ರತಿಯೊಂದು ಯೋಜನೆಯಲ್ಲಿಯೂ ಗ್ರಾಮೀಣ ಆರ್ಥಿಕ ಬೆಳವಣಿಗೆಗಾಗಿ ಹಾಗೂ ನಿಶ್ಯಕ್ತ ಸಮಾಜದ ಏಳಿಗೆಗಾಗಿ 'ಸಹಕಾರಕ್ಕೆ' ಹೆಚ್ಚಿನ ಮಹತ್ವವನ್ನು ಕೊಡಲಾಗಿದೆ. ಜನ ಸಾಮಾನ್ಯರ ಹಿತ ಸಂರಕ್ಷಣೆ ಮತ್ತು ಏಳಿಗೆಯೇ ಅಭಿವೃದ್ಧಿ ಯೋಜನೆಗಳ ಮುಖ್ಯಗುರಿ. ಈ ಗುರಿಯನ್ನು ಈಡೇರಿಸಲು ನಮ್ಮ ಪಂಚವಾರ್ಷಿಕ ಯೋಜನೆಗಳು 20 ವರ್ಷಗಳಿಂದ ನಿರಂತರವಾಗಿ ಶ್ರಮಿಸುತ್ತಿವೆ. ಯೋಜನೆಗಳು ಯಶಸ್ವಿಯಾಗಿ ಯೋಜಕರ ಶ್ರಮ ಸಾರ್ಥಕವಾಗಬೇಕಾದರೆ ಅಭಿವೃದ್ಧಿ ಕೆಲಸ ಗಳಲ್ಲಿ ಭಾಗವಹಿಸಲು ಜನರು ಉತ್ಸಾಹದಿಂದ ಬರಬೇಕು. ಅಂದರೆ ಯೋಜನೆಗಳ ಯಶಸ್ಸಿಗೆ ಸಹಕಾರಿ ಚಳುವಳಿ ಬಲಗೊಳ್ಳ ಬೇಕು. ಸಹಕಾರವು ಸಮಾಜದ ದುರ್ಬಲ ವರ್ಗಗಳ ಆಸೆ-ಆಕಾಂಕ್ಷೆಗಳನ್ನು ಈಡೇರಿಸಬಲ್ಲ ಸಾಧನವಾಗಬೇಕು. ನಮ್ಮ ದೇಶಕ್ಕೆ ಸಹಕಾರಿ ಚಳುವಳಿಯು ಅನಿವಾರ್ಯವಾಗಿದೆ. ಸಹಕಾರಿ ಚಳುವಳಿ ಬಲಗೊಳ್ಳದಿದ್ದಲ್ಲಿ ಹಳ್ಳಿಗಳ ಭವಿಷ್ಯ ಅಂಧಕಾರವಾಗು ತ್ತದೆ. ಸಹಕಾರಿ ಚಳುವಳಿಯು ಜನತಾ ಚಳುವಳಿಯಾದರೆ ಮಾತ್ರ ಹಳ್ಳಿಗಳ ಉದ್ಧಾರ ಸಾಧ್ಯ. ಹೀಗೆ ಪಂಚವಾರ್ಷಿಕ ಯೋಜನೆಗಳಿಗೂ, ಸಹಕಾರಕ್ಕೂ ನಿಕಟ ಸಂಬಂಧವಿದೆ. ಯೋಜನೆಗಳು ಯಶಸ್ವಿಯಾಗಬೇಕಾದರೆ ಯೋಜನೆಗಳ ಕಾರ್ಯ ಕ್ರಮಗಳು ಉತ್ತಮ ರೀತಿಯಲ್ಲಿ ರೂಪಿಸಲ್ಪಡಬೇಕಾದರೆ ಸಹ ಕಾರಿ ಸಂಸ್ಥೆಗಳು ಅಧಿಕ ಪ್ರಮಾಣದಲ್ಲಿ, ವ್ಯವಸ್ಥಿತ ರೀತಿಯಲ್ಲಿ ಬೆಳೆದು ಬರಬೇಕು.

**ಉತ್ತಮ ಕೃಷಿಗೆ ಸಹಕಾರವೇ ತಳಹದಿ :**

ಭಾರತದಲ್ಲಿ ಕೃಷಿಯು ಇದುವರೆಗೂ ರೈತರ ತಲೆಮಾರಿನಿಂದ

ಅನೂಚಾನವಾಗಿ ಬಂದ ಒಂದು ಯಾಂತ್ರಿಕ ಕಸುಬಾಗಿಯೇ ಉಳಿದಿತ್ತು. ಆದರೆ ಇತ್ತೀಚೆಗೆ ಈ ದಿಕ್ಕಿನಲ್ಲಿ ಅನೇಕ ಕ್ರಾಂತಿ ಕಾರಕ ಬದಲಾವಣೆಗಳಾಗುತ್ತಿವೆ. ಇಂದಿನ ರೈತರು ತಮ್ಮ ಪೂರ್ವಜರಂತಲ್ಲದೆ, ಕೃಷಿ ತಜ್ಞರ ನೆರವಿನಿಂದ ತಮ್ಮ ಕಸುಬಿನಲ್ಲಿ ದಕ್ಷತೆಯನ್ನು ಪಡೆಯಲು ಕಾತುರರಾಗಿದ್ದಾರೆ. ಇದಕ್ಕೆ ಕಾರಣ ಸಹಕಾರದ ಪ್ರಜ್ಞೆಯು ರೈತರಲ್ಲಿ ಮೂಡುತ್ತಿರುವುದು. ಇದಕ್ಕಾಗಿ ಸಹಕಾರ ಸಂಸ್ಥೆಗಳು ನಿರಂತರವಾಗಿ ಶ್ರಮಿಸುತ್ತಿವೆ. ಉತ್ತಮ ಬೇಸಾಯ, ಉತ್ತಮ ಮಾರಾಟ, ಉತ್ತಮ ಜೀವನ ಇವೇ ಸಹಕಾರ ಸಂಸ್ಥೆಗಳ ಮುಖ್ಯ ಧ್ಯೇಯಗಳು. ಇದು ಸಫಲವಾದರೆ ಕೃಷಿ ಉತ್ಪಾದನೆಯು ಹೆಚ್ಚಿ ನಾಡು ಪ್ರಗತಿಯ ಬೀಡಾಗುವುದರಲ್ಲಿ ಸಂದೇಹವಿಲ್ಲ. ಕೃಷಿಯು ಅಭಿವೃದ್ಧಿಯಾಗಬೇಕಾದರೆ ಕೃಷಿ ವ್ಯವಸ್ಥೆಯು ಉತ್ತಮಗೊಳ್ಳಬೇಕು. ಉತ್ತಮ ಕೃಷಿ ಎಂದರೆ ಸಾಗುಭೂಮಿಗೆ ರಾಸಾಯನಿಕ ಗೊಬ್ಬರಗಳನ್ನು ಹಾಕಿ ಆಧುನಿಕ ಸಲಕರಣೆಗಳನ್ನು ಬಳಸಿ ಸಾಗುವಳಿ ಮಾಡುವುದು. ಕೃಷಿಯಲ್ಲಿ ಅಧಿಕ ಉತ್ಪನ್ನವನ್ನು ಪಡೆಯಬೇಕಾದರೆ ಸಾಗುವಳಿಯನ್ನು ಒಬ್ಬೊಬ್ಬರೇ ಮಾಡುವುದಕ್ಕಿಂತಲೂ ಹಲವಾರು ಜನ ಒಟ್ಟಿಗೆ ಸೇರಿ ಸಹಕಾರ ಸಂಸ್ಥೆಗಳ ಮೂಲಕ ಬೇಕಾದ ಉಪಕರಣಗಳನ್ನು ಪಡೆದು ಸಾಗುವಳಿ ಮಾಡುವುದು ಉತ್ತಮ. ಇದರಿಂದ ದೈಹಿಕಬಲ ಅಧಿಕಗೊಂಡು ಯಾರೊಬ್ಬರಿಗೂ ಹೆಚ್ಚಿನ ಶ್ರಮವಿಲ್ಲದೆ ಕೆಲಸ ಸುಗಮವಾಗಿ ನಡೆಯುವುದು. ಪರಸ್ಪರ ಸಹಾಯಬುದ್ಧಿ, ಸಹಾನುಭೂತಿ, ಪ್ರೀತಿ, ಸೌಹಾರ್ದತೆ, ಸೇವಾಭಾವನೆ, ಕರ್ತವ್ಯ, ಕರುಣೆ ಮುಂತಾದ ಸದ್ಗುಣಗಳು ಅವರಲ್ಲಿ ಬೇರು ಬಿಡುವುವು. ಇದರಿಂದಾಗಿ ಒಬ್ಬರ ಯೋಗಕ್ಷೇಮ, ಹಿತಗಳನ್ನು ಇನ್ನೊಬ್ಬರು ಗಮನಿಸಿ ಪರಸ್ಪರ

ಹಾಯತಾ ದೃಷ್ಟಿಯಿಂದ ಒಟ್ಟುಗೂಡಿ ಕೆಲಸದಲ್ಲಿ ಪಾಲ್ಗೊಳ್ಳು
ತ್ತಾರೆ. ಈ ರೀತಿ ಒಟ್ಟಿಗೆ ಸಾಗುವಳಿ ಮಾಡುವುದರಿಂದ ಸ್ವಾರ್ಥತೆ
ಳಿಸಿಹೋಗಿ ನಿಸ್ವಾರ್ಥತೆ ತಲೆ ಎತ್ತಿ ನಿಲ್ಲುತ್ತದೆ. ಇಲ್ಲಿ
ಯಾರೊಬ್ಬರ ಲಾಭವೂ ಮುಖ್ಯವಲ್ಲ. ಸಮಾನ ಹಂಚಿಕೆಯೇ
ದರ ಧ್ಯೇಯ. ಇದರಿಂದಾಗಿ ಸಹಜವಾಗಿಯೇ ಕೃಷಿಯು
ತ್ತಮಗೊಂಡು ಅಧಿಕ ಉತ್ಪನ್ನಕ್ಕೆ ದಾರಿಯಾಗುತ್ತದೆ. ಈ
ಯಲ್ಲಿ ಕೆಲವು ವಿಷಯಗಳನ್ನು ಗಮನಿಸಬೇಕಾದ್ದು ಅವಶ್ಯ.
ತರು ಕೃಷಿಯನ್ನು ಫಲಪ್ರದವನ್ನಾಗಿ ಮಾಡಲು ಸಾಲದ
ೌಕರ್ಯಗಳು, ಸುಧಾರಿತ ಬೀಜಗಳು, ಉತ್ತಮ ಗೊಬ್ಬರ
ಳು, ಯಂತ್ರೋಪಕರಣಗಳ ಬಳಕೆ, ನೀರಾವರಿ ಸೌಕರ್ಯ
ನ್ನು ಸಹಕಾರ ಸಂಸ್ಥೆಗಳಿಂದ ಪಡೆಯುವುದು ಅಗತ್ಯ.
ದರಿಂದಾಗಿ ಕೃಷಿಯ ಉತ್ಪನ್ನ ಹೆಚ್ಚುವುದು. ಆದರೆ ಕೇವಲ
ಉತ್ಪತ್ತಿ ಹೆಚ್ಚಿಸಿದ ಮಾತ್ರಕ್ಕೆ ಸಹಕಾರದ ಹೊಣೆ ಮುಗಿಯು
ಲ್ಲ. ಹೆಚ್ಚಿಸಿದ ಉತ್ಪತ್ತಿಯನ್ನು ಯೋಗ್ಯಬೆಲೆಗೆ ಮಾರಾಟ
ಮಾಡಿ ರೈತರ ಆದಾಯವನ್ನು ಹೆಚ್ಚಿಸಲು ಸಹಕಾರವು ಇನ್ನೊ
ಂದು ಹೆಜ್ಜೆ ಮುಂದೆ ಬಂದು ಸಹಕಾರ ಸಂಸ್ಥೆಗಳಾಗಿ ರೂಪು
ಗೊಂಡಿವೆ. ಇದರಿಂದ ರೈತರ ಉತ್ಪತ್ತಿಗೆ ನ್ಯಾಯ ಬೆಲೆ ದೊರೆತು
ವರ ಜೀವನ ಉತ್ತಮಗೊಳ್ಳುತ್ತದೆ.

ಇಂದು ಹೊಸರೀತಿಯ ಸಮಾಜದ ರಚನೆಯಾಗಬೇಕು.
ಹಳ್ಳಿಯ ಜೀವನದಲ್ಲಿ ಮಾರ್ಪಾಡನ್ನು ತರಬೇಕೆಂಬ ಇಚ್ಛೆ
ಸರಕಾರ ಮತ್ತು ಜನತೆಯಲ್ಲಿ ಬಲವಾಗಿ ಬೆಳೆಯುತ್ತಿದೆ. ಇದು
ಸಹಕಾರದಿಂದಲೇ ಸಾಧ್ಯ. "ದುಡಿಯುವ ಅನೇಕ ಲಕ್ಷ ಕೈಗಳಿರು
ವಾಗ ಬಂಡವಾಳದ ಬಗ್ಗೆ ಚಿಂತೆಯನ್ನು ಮಾಡುವುದು ಶುದ್ಧ
ಮೂರ್ಖತನ", ಎಂದು ಗಾಂಧೀಜಿಯವರು ಹೇಳಿದ್ದಾರೆ. ಇದು

ಸಾಧ್ಯವಾಗಬೇಕಾದರೆ ಸಹಕಾರದಲ್ಲಿ ರೈತರ ನಂಬಿಕೆ ಭದ್ರವಾ ಬೇಕು. ಸಹಬಾಳ್ವೆಯ ಸೌಖ್ಯದ ಅರಿವಾಗಬೇಕು.

ರಾಷ್ಟ್ರದಲ್ಲಿ ಕೃಷಿ ಉತ್ಪನ್ನ ಹೆಚ್ಚಿ ಆಹಾರ ಸ್ವಾವಲಂ ಯನ್ನು ಪಡೆದು ಆರ್ಥಿಕ ಪ್ರಗತಿಯ ಕಿರಣಗಳು ಮ ಬೇಕಾದರೆ ಉತ್ತಮ ಕೃಷಿಗೆ ಸಹಕಾರ ತಳಹದಿಯಾಗಲೇಬೇ 'ಸಹಕಾರ ಕೃಷಿ ಅಭಿವೃದ್ಧಿಯ ಅಳತೆಗೋಲು' ಎಂಬುದ ಪ್ರತಿಯೊಬ್ಬರೂ ನೆನಪಿನಲ್ಲಿಡಬೇಕು.

**ಸಹಕಾರ ಸಂಸ್ಥೆಗಳ ಸಾಫಲ್ಯ-ವೈಫಲ್ಯ :**

ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ಭಾರತದ ಪರಿ ಬಹಳ ಕಷ್ಟಕರವಾಗಿದ್ದು ರಾಷ್ಟ್ರವು ಸಮಸ್ಯೆಗಳ ಆಗರವಾಗಿ ಆದರೆ ಇಂದಿನ ಭಾರತ ಪ್ರಗತಿಪಥದಲ್ಲಿ ಧೈರ್ಯ ಮುನ್ನಡೆಯುತ್ತಿರುವ ಒಂದು ರಾಷ್ಟ್ರವಾಗಿದೆ. ಬಡತನ ಹೊಡೆದೋಡಿಸಲು, ಅಸಮಾನತೆ ಹಾಗೂ ಸಾಮಾ ಅನ್ಯಾಯವನ್ನು ಎದುರಿಸಲು ನಿರಂತರವಾಗಿ ಶ್ರಮಿಸುತ್ತಿ ಕೆಚ್ಚೆದೆಯ ರಾಷ್ಟ್ರವಾಗಿದೆ. ಹಳ್ಳಿಯ ಸಮಾಜದಲ್ಲಿ ಐ ಯನ್ನು ಹೆಚ್ಚಿಸುವ ಸಲುವಾಗಿ ಹಾಗೂ ಸಂಪದ್ಭರಿತವಾಗಿ ಸಂಪನ್ಮೂಲಗಳನ್ನು ಯೋಗ್ಯ ರೀತಿಯಲ್ಲಿ ಉಪಯೋಗ ಮಾ ಕೊಳ್ಳಲು ಅನುಕೂಲವಾಗುವಂತೆ ಸಹಕಾರಿ ಪದ್ಧತಿಯ ಸಮ ನಿರ್ಮಾಣ ವ್ಯವಸ್ಥೆ ರಾಷ್ಟ್ರದಲ್ಲಿ ಎಲ್ಲೆಲ್ಲೂ ನಡೆಯುತ್ತಿ ಈಗಾಗಲೇ ಗ್ರಾಮಾಂತರ ಪ್ರದೇಶಗಳಲ್ಲಿ ಹಲವಾರು ಸಹ ಸಂಸ್ಥೆಗಳು ರೂಪುಗೊಂಡು ರೈತರ ಉದ್ಧಾರಕ್ಕಾಗಿ, ಅಭಿವೃದ್ಧಿಗಾಗಿ ಶ್ರಮವನ್ನು ಲೆಕ್ಕಿಸದೆ ಭರದಿಂದ ಕಾರ್ಯಗಳ ನಿರ್ವಹಿಸುತ್ತಿವೆ. ಇದು ನಿಜಕ್ಕೂ ಒಂದು ಮಹತ್ವಪೂರ್ಣವ

ಕ್ರಾಂತಿ ಎಂದೇ ಹೇಳಬಹುದು. ಇಂದಿನ ವ್ಯಾಪಕವಾದ ದಾರಿದ್ರ್ಯ, ಉದ್ಯೋಗಾಭಾವ ಮತ್ತು ಗಗನಕ್ಕೇರುತ್ತಿರುವ ಬೆಲೆಗಳ ಏರಿಕೆ ಈ ಮೂರು ಸಮಸ್ಯೆಗಳಿಗೆ ಪರಿಹಾರವೆಂದರೆ ಕೃಷಿರಂಗದ ತ್ವರಿತ ಅಭಿವೃದ್ಧಿ, ಏಕೆಂದರೆ ಬೃಹತ್ ಪ್ರಮಾಣದ ಉದ್ದಿಮೆಗಳ ಮೇಲೆ ಹೂಡಿದ ಹಣಕ್ಕಿಂತ ಅತ್ಯಂತ ಕ್ಷಿಪ್ರ ಕಾಲದಲ್ಲಿ ಫಲ ಕೊಡುವ ಕ್ಷೇತ್ರವೆಂದರೆ ಕೃಷಿರಂಗವೊಂದೇ. ಇದು ಸಾಧ್ಯವಾಗಬೇಕಾದರೆ ಸಹಕಾರ ಸಂಸ್ಥೆಗಳು ಇನ್ನೂ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ನಿರ್ಮಾಣವಾಗಬೇಕು. ನಮ್ಮ ರಾಷ್ಟ್ರದ ಮುಖ್ಯ ಗುರಿಯಾಗಿರುವ ಪ್ರಜಾಸತ್ತಾತ್ಮಕವಾದ ಮಾರ್ಗದಲ್ಲಿ ಆರ್ಥಿಕಾಭಿವೃದ್ಧಿ ಮತ್ತು ಸಮಾಜವಾದದ ಸ್ಥಾಪನೆ, ಇದು ಸಾಧಿತವಾಗಬೇಕಾದರೆ ಪಂಚವಾರ್ಷಿಕ ಯೋಜನೆಗಳು ಸಹಕಾರ ಸಂಸ್ಥೆಗಳಿಗೆ ಪ್ರಮುಖ ಸ್ಥಾನವನ್ನು ನೀಡಬೇಕು. ಏಕೆಂದರೆ ನಮ್ಮ ಅರ್ಥವ್ಯವಸ್ಥೆಯಲ್ಲಿ ಸಹಕಾರ ಸಂಸ್ಥೆಗಳು ಮಹತ್ತರವಾದ ಪಾತ್ರವನ್ನು ನಿರ್ವಹಿಸುತ್ತವೆ. ನಮ್ಮ ರಾಷ್ಟ್ರವು ಆರ್ಥಿಕವಾಗಿ ಅಭಿವೃದ್ಧಿ ಹೊಂದಬೇಕಾದರೆ ಕೃಷಿಯು ಉತ್ಪನ್ನವು ಅಧಿಕಗೊಳ್ಳಬೇಕು. ಅದಕ್ಕೆ ಮೊದಲು ಕೃಷಿಯ ಆಧಾರಸ್ತಂಭಗಳಾದ ರೈತರ ಉದ್ಧಾರವಾಗಬೇಕು. ಈ ದೃಷ್ಟಿಯಿಂದ ಸಹಕಾರ ಸಂಸ್ಥೆಗಳು ಸಲ್ಲಿಸುತ್ತಿರುವ ಸೇವೆ ಅದ್ಭುತವಾದುದು. ಸಹಕಾರ ಸಂಸ್ಥೆಗಳು ಇಂದು ನಾಡಿನ ರೈತರ ಕಲ್ಯಾಣ ಕೇಂದ್ರಗಳಾಗಿವೆ. ರೈತರ ಆರ್ಥಿಕ ಉನ್ನತಿಗೆ ಪ್ರಮುಖ ಸಾಧನಗಳಾಗಿವೆ.

ನಮ್ಮ ದೇಶದಲ್ಲಿ ಕೃಷಿಯ ಕಡಿಮೆ ಉತ್ಪನ್ನ ಹಾಗೂ ಅತಿ ಜನಸಂಖ್ಯೆ ಎರಡೂ ಜಟಿಲವಾದ ಸಮಸ್ಯೆಗಳಾಗಿ ಪರಿಣಮಿಸಿವೆ. ಇವುಗಳನ್ನು ಎದುರಿಸಿ ಪರಿಹಾರೋಪಾಯಗಳನ್ನು ಕಂಡು

ಹಿಡಿಯಬೇಕಾದರೆ ವಿಜ್ಞಾನದ ಮೊರೆ ಹೋಗುವುದು ಅಗ
ಕೃಷಿ ಉತ್ಪತ್ತಿಯನ್ನು ಹೆಚ್ಚಿಸುವ ಸೂಕ್ತ ಸಾಧನವೆಂ
ವಿಜ್ಞಾನ. ಇದುವರೆಗೂ ಭಾರತದಲ್ಲಿ ವಿಜ್ಞಾನದ ನೆರ
ತಾಂತ್ರಿಕ ಸಹಾಯ ಎರಡೂ ಕೃಷಿಗೆ ಅಷ್ಟಾಗಿ ದೊರೆತಿರಲಿ
ಆದರೆ ಇತ್ತೀಚೆಗೆ ರೈತರು ಕೃಷಿಯ ಬೆಳವಣಿಗೆಗೆ ರಸಾಯ
ಗೊಬ್ಬರ, ಸುಧಾರಿಸಿದ ಬೀಜಗಳು, ಆಧುನಿಕ ಉಪಕರಣಗ
ಅತ್ಯಗತ್ಯವೆಂದು ಭಾವಿಸುತ್ತಿದ್ದಾರೆ. ಇದರ ಪರಿಣಾಮವಾ
ಹೈಬ್ರಿಡ್ ಬೀಜಗಳು, ಕ್ರಿಮಿನಾಶಕಗಳು, ಹೊಸ ರೀತಿ
ಉಪಕರಣಗಳಾದ ಟ್ರಾಕ್ಟರ್, ಬುಲ್ಡೋಜರ್‌ಗಳ ಉ
ಯೋಗ ಹೆಚ್ಚುತ್ತಿದೆ. ಕೃಷಿಕ್ಷೇತ್ರದಲ್ಲಿ ಇದೊಂದು ಶುಭಸೂಚ
ಇದಕ್ಕೆಲ್ಲಾ ಮೂಲಕಾರಣ ಸಹಕಾರದ ತತ್ವದ ಮೇಲೆ ರ
ವಾಗಿರುವ ಸಹಕಾರ ಸಂಸ್ಥೆಗಳ ನಿಸ್ವಾರ್ಥಸೇವೆ ಮತ್ತು ನಿರಂ
ಶ್ರಮವೆಂದು ಹೇಳಬಹುದು. ಇಂದು ಸಹಕಾರ ಸಂಸ್ಥೆಗ
ರೈತರ ಬದುಕಿನಲ್ಲಿ ಹಾಸುಹೊಕ್ಕಾಗಿವೆ. ಬಡತನವೆಂಬ ಕತ್ತಲೆ
ಕೂಪದಲ್ಲಿ ಬಿದ್ದು ನೀರಸ ಬದುಕನ್ನು ನಡೆಸುತ್ತಿದ್ದ ಅ
ಸುತ್ತಲೂ ಪ್ರಭಾವಬೀರಿ ಕ್ರಮೇಣವಾಗಿ ನೆಮ್ಮದಿ, ಸ
ಶಾಂತಿಗಳ ಬದುಕಿನೆಡೆಗೆ ಸಾಗಿಸುತ್ತಿವೆ. ಅಭಿವೃದ್ಧಿ ಹೊಂ
ತ್ತಿರುವ ದೇಶದಲ್ಲಿ ಜನತೆಯ ಆರ್ಥಿಕ ಏಳಿಗೆಗಾಗಿ ಸಹಕ
ಸಂಸ್ಥೆಗಳು ವಿವಿಧ ಆರ್ಥಿಕ ಚಟುವಟಿಕೆಗಳನ್ನು ಕೈಗೊಂಡಿದೆ
ಈ ಸಂಸ್ಥೆಗಳ ಕಾರ್ಯಕ್ಷೇತ್ರವು ದಿನೇ ದಿನೇ ವಿಶಾ
ವಾಗುತ್ತಿದೆ. 1960–61ರಿಂದ 1972ರ ಜೂನ್‌ವರೆಗಿನ ಅ
ಯಲ್ಲಿನ ಅಂಕಿ–ಅಂಶಗಳನ್ನು ಗಮನಿಸಿದರೆ ಸಹಕಾರ ಸಂಸ್ಥೆ
ಬೆಳವಣಿಗೆಯ ಬಗ್ಗೆ ತಿಳಿಯುತ್ತದೆ. 1960–61
ಗ್ರಾಮಾಂತರ ಜನಸಂಖ್ಯೆಯಲ್ಲಿ 170 ಲಕ್ಷ ಮಂದಿ (24

ಸಹಕಾರ ಸಂಸ್ಥೆಗಳ ಸದಸ್ಯರಾಗಿದ್ದರು. 1972ರಲ್ಲಿ 320 ಲಕ್ಷ ಮಂದಿ (36%) ಸಹಕಾರ ಸಂಸ್ಥೆಗಳ ಸದಸ್ಯರಾಗಿದ್ದಾರೆ. ಸಹಕಾರ ಸಂಸ್ಥೆಗಳು 1960-61ರಲ್ಲಿ ನೀಡಿದ್ದ ಸಾಲದ ಮೊತ್ತ 218 ಕೋಟಿ ರೂ. ಇದ್ದು, 1972ರ ವೇಳೆಗೆ 803 ಕೋಟಿ ರೂ.ಗಳಿಗೆ ಏರಿದೆ. ಇದು ಸಹಕಾರ ಸಂಸ್ಥೆಗಳ ಸಾಫಲ್ಯಕ್ಕೆ ಒಂದು ನಿದರ್ಶನವಾಗಿದೆ. ಸಹಕಾರ ಸಂಸ್ಥೆಗಳಿಂದಾಗಿ ಇಂದು ಜನರು ಸ್ಥಳೀಯ ಅಭಿವೃದ್ಧಿ ಕಾರ್ಯಗಳಲ್ಲಿ ನೇರವಾಗಿ ಭಾಗ ವಹಿಸಲು ಅನುಕೂಲವಾಗಿದೆ. ಅಷ್ಟೊಂದು ವಿಸ್ತಾರವಲ್ಲದ ಮತ್ತು ಜಟಿಲವಲ್ಲದ ರೀತಿಯಲ್ಲಿ ಪ್ರಜಾಪ್ರಭುತ್ವ ಪದ್ಧತಿಯು ಹೀಗೆ ಕಾರ್ಯಗಳನ್ನು ನಿರ್ವಹಿಸುತ್ತಿದೆ ಎನ್ನುವುದನ್ನು ಹಳ್ಳಿಯ ಜನ ತಿಳಿದುಕೊಳ್ಳುವಂತಾಗಿದೆ. ಸಹಕಾರ ಸಂಸ್ಥೆಗಳು ಇಂದು ಗ್ರಾಮಾಂತರ ಪ್ರದೇಶಗಳಲ್ಲಿ ಸಾಲದ ಪೂರೈಕೆ, ಉದ್ಯೋಗಗಳ ಪೂರೈಕೆ ಹಾಗೂ ಜನತೆಯ ಜೀವನದಲ್ಲಿ ಆರ್ಥಿಕ ಹಾಗೂ ಸಾಮಾಜಿಕವಾಗಿ ಹಾಸುಹೊಕ್ಕಾಗಿ ಬೆಳೆದು ಸಂಪತ್ತನ್ನೂ, ಸಾಮಾಜಿಕ ಸಮಾನತೆಯನ್ನು ತರಲು ಪ್ರಯತ್ನಿಸುತ್ತಿವೆ. ಈ ಸಂಸ್ಥೆಗಳ ಮೂಲೋದ್ದೇಶ ಸೇವೆಯೇ ಹೊರತು ಲಾಭ ಗಳಿಕೆ ಯಲ್ಲ. ಈ ಸಂಸ್ಥೆಗಳನ್ನು ಸ್ಥಾಪಿಸಿರುವುದರ ಮುಖ್ಯ ಗುರಿ ಹಳ್ಳಿಯ ಸಾಹುಕಾರರಿಗೆ ಹೆಚ್ಚು ಬಡ್ಡಿ ತೆತ್ತು ಅವರ ಸಾಲದ ಶೂಲಕ್ಕೆ ಸಿಕ್ಕು, ದಿನೇ ದಿನೇ ಬಡವರಾಗುತ್ತಿರುವ ರೈತರನ್ನು ಸಾಹುಕಾರರ ಕಪಿಮುಷ್ಟಿಯಿಂದ ಬಿಡಿಸಿ ಅವರಿಗೆ ಕಡಿಮೆ ಬಡ್ಡಿಗೆ ಸಾಲ ನೀಡುವುದರ ಮೂಲಕ ಕೃಷಿಕಾರ್ಯದಲ್ಲಿ ಅವರನ್ನು ಉತ್ತೇಜಿಸುವುದಾಗಿದೆ. ಆದರೆ ಕೇವಲ ಸಾಲ ನೀಡಿಕೆಯೇ ಈ ಸಂಸ್ಥೆಗಳ ಮುಖ್ಯಗುರಿಯಲ್ಲ. ಈ ಸಂಸ್ಥೆಗಳು ಶ್ರಮವಹಿಸಿ ದುಡಿದು ಗಳಿಸಿದ ಲಾಭವನ್ನು ಜನಸಾಮಾನ್ಯರ ಹಿತಕ್ಕಾಗಿ ಬಳಸಲಾಗುವುದು.

ಇದುವರೆಗೂ ಸಹಕಾರಿ ಕ್ಷೇತ್ರದಿಂದ ಆಗಿರುವ ಸೇವೆ ಅತ್ಯಪ್ರಶಂಸನೀಯವಲ್ಲ. ಇತ್ತೀಚಿಗೆ ಮೊದಲಿಗಿಂತಲೂ ಸಹಕಾರಿ ಸಂಸ್ಥೆಗಳಿಂದ ಸಿಗುವ ಸಾಲದ ಮೊತ್ತ ಹೆಚ್ಚುತ್ತಿದೆ. ರೈತರಲ್ಲಿ ಸಹಕಾರಿ ಜೀವನ ಆಕರ್ಷಕವಾಗುತ್ತಿವೆ. ಹೆಚ್ಚು ಹೆಚ್ಚು ಬೆಳೆದು, ನೆಮ್ಮದಿಯ ಜೀವನವನ್ನು ಬಾಳಬೇಕೆಂಬ ಆಸೆ, ಹುಮ್ಮಸ್ಸುಗಳು ತಲೆದೋರಿರುವುದರಿಂದ ಇಂದು ರೈತರು ಸಹಕಾರ ಸಂಸ್ಥೆಗಳಿಂದ ಸಾಲ ಪಡೆಯುವುದು ಹೆಚ್ಚಾಗಿದೆ. ಪರಿಣಾಮವಾಗಿ ಅವರ ಒಟ್ಟು ಉತ್ಪತ್ತಿಯಲ್ಲಿ ಹೆಚ್ಚಳ ಕಾಣಬರುತ್ತಿದೆ. ಆದರೂ ಈ ದಿಸೆಯಲ್ಲಿ ಪೂರ್ತಿಯಾಗಿ ತೃಪ್ತಿ ಕಂಡು ಬಂದಿಲ್ಲ. ಕೆಲವರು ಯಾವ ಉದ್ದೇಶಕ್ಕಾಗಿ ಸಾಲಪಡೆಯುವರೋ, ಆ ಉದ್ದೇಶಕ್ಕಾಗಿ ಸಾಲವನ್ನು ಬಳಸದೆ ಇತರ ಗೃಹ ಕಾರ್ಯಗಳಿಗೆ ಉಪಯೋಗಿಸುವುದೂ ಉಂಟು. ಇದರಿಂದ ಸಂಸ್ಥೆಗಳ ಪ್ರಗತಿಗೆ ಅಡ್ಡಿಯಾಗುತ್ತದೆ. ಅಲ್ಲದೆ ಸಾಲದ ಮರುಪಾವತಿಯನ್ನೂ ಸರಿಯಾಗಿ ಮಾಡುವುದಿಲ್ಲ. ಬಡತನದ ಬೇಗೆಯಿಂದಾಗಿ ಸದಸ್ಯತ್ವದ ಫೀಸಿನ (Membership fee) ಹಣವನ್ನು ಕೊಡಲೂ ರೈತರು ಅಸಮರ್ಥರಾಗಿದ್ದಾರೆ. ಆದ್ದರಿಂದ ಗ್ರಾಮ ಆರ್ಥಿಕತೆಯನ್ನು ಪುನರುಜ್ಜೀವನಗೊಳಿಸಲು ರೈತರಿಗೆ ಅಗತ್ಯವಾದ ಸಾಲಗಳನ್ನು ಯಥೋಚಿತವಾಗಿ ಒದಗಿಸುವುದರ ಜೊತೆಗೆ ಕೊಟ್ಟ ಸಾಲ ಉತ್ಪಾದಕವಾಗಿ ಪರಿಣಮಿಸುವಂತೆಯೂ, ಅದು ಸಂಸ್ಥೆಗೆ ಮರುಪಾವತಿಯಾಗುವಂತೆಯೂ ಕ್ರಮ ತೆಗೆದುಕೊಳ್ಳಬೇಕಾದ್ದು ಅವಶ್ಯ. ಆದರೆ ಈ ದಿಸೆಯಲ್ಲಿ ಹೆಮ್ಮೆಪಟ್ಟುಕೊಳ್ಳುವಂತಹ ಕಾರ್ಯ ನಡೆದಿಲ್ಲವೆಂದೇ ಹೇಳಬೇಕು. ಸಾಲಗಳ ಮೊತ್ತವೇನೋ ನಾಲ್ಕು ಪಟ್ಟಿನಷ್ಟು ಹೆಚ್ಚಿದ್ದರೂ ಕೊಟ್ಟ ಸಾಲವು ಸಾರ್ಥಕವಾಗುವಂತೆಯೂ, ಅದು ವಸೂಲಾಗು

ಮಂತೆಯೂ ಶೀಘ್ರ ಕ್ರಮಗಳನ್ನು ಕೈಗೊಳ್ಳುತ್ತಿಲ್ಲ. ಸಂಸ್ಥೆಗಳ ಸದಸ್ಯರಲ್ಲಿ ಶೇಕಡ 36ರಷ್ಟು ಮಂದಿ ಮಾತ್ರ ಸಾಲದ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆಂದು ತಿಳಿದು ಬಂದಿದೆ. 1960-61ರಲ್ಲಿ 44 ಕೋಟಿ ರೂ. ಸಾಲವು ಬಾಕಿಯಿದ್ದಿತು. ಅಂದರೆ, ಒಟ್ಟು ಸಾಲದ ಶೇಕಡ 20 ರಷ್ಟು, ಮತ್ತು 1971-72ರಲ್ಲಿ ಬಾಕಿಯುಳ್ಳಿದ್ದ ಸಾಲದ ಮೊಬಲಗು 354 ಕೋಟಿ ರೂ.ಗಳಿಗೆ ಏರಿತು, ಅಂದರೆ, ಒಟ್ಟು ಸಾಲದ ಶೇಕಡ 44ರಷ್ಟು. ಇದರಿಂದ ಸಹಕಾರ ಚಳುವಳಿಯು ಸಾಕಷ್ಟು ಯಶಸ್ವಿಯಾಗಿಲ್ಲ ಎನ್ನುವುದು ತಿಳಿದು ಬರುತ್ತದೆ. ಇಂದು ಸಹಕಾರ ಚಳುವಳಿಯು ತನ್ನ ಪೂರ್ಣ ಸಾಮರ್ಥ್ಯದಿಂದ ಸೇವೆಸಲ್ಲಿಸಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಕಾರಣ ಸಹಕಾರ ಚಳುವಳಿಯು 76 ವರ್ಷಗಳಷ್ಟು ಹಳೆಯದಾದರೂ ಇಂದಿಗೂ ಸಹ ಸರಕಾರದ ಕೈಗೂಸಾಗಿ, ಅದರ ಶಿಫಾರಸಿನನ್ವಯ ನಡೆಯುತ್ತಿರುವುದೇ ಆಗಿದೆ. ಗ್ರಾಮಾಭಿವೃದ್ಧಿ, ಕೃಷಿ ಹಾಗೂ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ, ರಾಷ್ಟ್ರದ ಆರ್ಥಿಕ ಪ್ರಗತಿಗೆ ಸಹಕಾರವೇ ಸೂಕ್ತ ಮಾರ್ಗವಾಗಿದೆ. ಆದರೆ ಇದು ಸಾಧ್ಯವಾಗಬೇಕಾದರೆ ಸಹಕಾರ ಚಳುವಳಿಯು ಜನತೆಯ ಸ್ವಯಂಪ್ರೇರಣೆಯೊಂದಿಗೆ ಬೆಳೆಯುವಂತಾಗಬೇಕು. ಸಹಕಾರವು ಕೇವಲ ಸರಕಾರ ಪ್ರೋತ್ಸಾಹಿತ ಆಂದೋಲನವಾಗಿ ಪರಿಣಮಿಸಿದರೆ ಅಭಿವೃದ್ಧಿ ಕಾರ್ಯಗಳಲ್ಲಿ ನಿರೀಕ್ಷಿಸಿದಷ್ಟು ಪ್ರಗತಿ ಕಂಡು ಬರುವುದು ದುರ್ಲಭ. ಗ್ರಾಮೀಣ ಸಾಲ ಪರಿಶೀಲನಾ ಸಮಿತಿಯು ತನ್ನ ವರದಿಯಲ್ಲಿ ಹೀಗೆ ಹೇಳಿದೆ—"ಭಾರತದಲ್ಲಿ ಸಹಕಾರವು ಅಯಶಸ್ವಿಯಾಗಿದೆ, ಅದು ಯಶಸ್ವಿಯಾಗಲೇ ಬೇಕು." ಈ ಅಯಶಸ್ಸಿಗೆ ಮುಖ್ಯಕಾರಣವೆಂದರೆ ಮೇಲೆ ಹೇಳಿದಂತೆ ಸಹಕಾರವು ಜನಸಾಮಾನ್ಯರ ಚಳುವಳಿಯಾಗಿ

ಪರಿಣಮಿಸಿಲ್ಲ. ಸಹಕಾರ ಸಂಸ್ಥೆಗಳ ಸಂಖ್ಯೆಯು ಹೆಚ್ಚಿದರೆ ಸಾಲದು, ಅದೇ ಪ್ರಮಾಣದಲ್ಲಿ ಜನರಲ್ಲಿ ಸಹಕಾರ ಭಾವನೆ ಹಾಗೂ ವಿಶ್ವಾಸ ಬೆಳೆಯಬೇಕು. ಅಲ್ಲದೆ ಸಹಕಾರ ಸಂಸ್ಥೆಗಳು ಒಮ್ಮನಸ್ಸಿನಿಂದ ಒಟ್ಟಿಗೆ ಶ್ರಮವಹಿಸಿ ಕೆಲಸಮಾಡಬೇಕು. ನಮ್ಮ ದೇಶದಲ್ಲಿ 1972 ರಲ್ಲಿ ಸಹಕಾರ ಸಂಸ್ಥೆಗಳ ಸಂಖ್ಯೆ 2,12,000 ದಿಂದ 1,59,000ಕ್ಕೆ ಇಳಿಯಿತು. ಇದಕ್ಕೆ ಕಾರಣ ಕೆಲಸಗಳನ್ನು ಸೂಕ್ತವಾಗಿ ನಡೆಸಲು ಕೈಲಾಗದ ದುರ್ಬಲ ಸಂಸ್ಥೆಗಳನ್ನು ಮುಚ್ಚಿದ್ದು. ಈ ರೀತಿಯ ದುರ್ಬಲ ಸಂಸ್ಥೆಗಳಿಂದ ದೇಶಕ್ಕೆ ಯಾವ ರೀತಿಯ ಸಹಾಯವೂ ಆಗು ವುದಿಲ್ಲ. ಆದರೆ ಈ ಸಂಸ್ಥೆಗಳನ್ನು ಮುಚ್ಚುವ ಬದಲು ಸ್ವಾವಲಂಬಿಯಾಗಿ, ಶಕ್ತಿಯುತವಾಗಿ ಕಾರ್ಯಗಳನ್ನು ನಿರ್ವ ಹಿಸುವಂತೆ ಅವುಗಳನ್ನು ಪುನರ್‌ರಚಿಸುವ ಕಾರ್ಯಕ್ರಮವನ್ನು ಕೈಗೊಂಡರೆ ಒಳಿತು. ಸಹಕಾರ ಸಂಸ್ಥೆಗಳ ಪ್ರಗತಿಯು ಇಂದು ಕುಂಠಿತಗೊಳ್ಳದೆ ಅಭಿವೃದ್ಧಿಯ ಹಾದಿಯತ್ತ ಮುನ್ನಡೆಯ ಬೇಕಾದರೆ ಈ ಸಂಸ್ಥೆಗಳು ಸಹಕಾರದ ತತ್ವಗಳನ್ವಯವಾಗಿ ಕಾರ್ಯಗಳನ್ನು ನಿರ್ವಹಿಸಬೇಕು. ಸಹಕಾರದ ಗೊತ್ತು ಗುರಿ ಗಳನ್ನು ಅರಿತುಕೊಂಡು ಅದರಂತೆ ನಡೆಯಬೇಕು. ಕೇಂದ್ರ ಸಂಸ್ಥೆಗಳು ಪ್ರಾಥಮಿಕ ಸಹಕಾರ ಸಂಸ್ಥೆಗಳಿಗೆ ಸಾಕಷ್ಟು ಹಣ ವನ್ನು ಒದಗಿಸಬೇಕು. ಸದಸ್ಯರ ಸಾಲದ ಬೇಡಿಕೆಗಳು ಪೂರ್ತಿ ಯಾಗಿ ಈಡೇರಬೇಕು. ಕೃಷಿಸಾಲ ಸಂಸ್ಥೆಗಳ ಮತ್ತು ಕೃಷಿಗೆ ಸಂಬಂಧಿಸಿದ ಮಾರಾಟ, ನೀರಾವರಿ ಮುಂತಾದ ಸಂಸ್ಥೆಗಳಲ್ಲಿ ಜೋಡಣೆಯಿರಬೇಕು. ಎಲ್ಲಕ್ಕಿಂತಲೂ ಮುಖ್ಯವಾಗಿ ಸಹಕಾರ ಸಂಸ್ಥೆಗಳ ಆಡಳಿತ ದಕ್ಷತೆ, ಪ್ರಾಮಾಣಿಕ ಹಾಗೂ ನಿಸ್ಪೃಹ ಸದಸ್ಯರನ್ನು ಒಳಗೊಂಡಿರಬೇಕು. ನುರಿತ ಹಾಗೂ ತರಬೇತಿ

ಹೊಂದಿದ ಆಡಳಿತದಿಂದ ಸಂಸ್ಥೆಗಳ ಪ್ರಗತಿ ಹೆಚ್ಚುತ್ತದೆ. ಇಂದು ಸಹಕಾರ ಸಂಸ್ಥೆಗಳ ಅಯಶಸ್ಸಿಗೆ ಅಪ್ರಮಾಣಿಕ, ಅದಕ್ಷತೆಯಿಂದ ಕೂಡಿದ ಆಡಳಿತವು ಬಹಳ ಮಟ್ಟಿಗೆ ಕಾರಣವಾಗಿದೆ ಎಂದು ಹೇಳಬಹುದು. ಇದರಿಂದಾಗಿ ಜನರು ಸಹಕಾರ ಚಳುವಳಿಯ ಬಗ್ಗೆ ವಿಶ್ವಾಸ ಕಳೆದುಕೊಂಡಿದ್ದಾರೆ. ಅಲ್ಲದೆ ಆಡಳಿತವನ್ನು ಸ್ವಾರ್ಥ ಜನರು ತಮ್ಮ ಸ್ವಹಿತಕ್ಕಾಗಿ ಬಳಸಿಕೊಳ್ಳುವುದರಿಂದ ಸಹಕಾರ ಸಂಸ್ಥೆಗಳ ಯಶಸ್ಸಿಗೆ ತೊಡಕಾಗುತ್ತದೆ. ನಮ್ಮ ದೇಶದಲ್ಲಿ ಎತ್ತು ನೀರಾವರಿಗೆ (Lift irrigation) ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿಲ್ಲ. ಕೃಷಿ ಅಭಿವೃದ್ಧಿಗೆ ಇದೊಂದು ದೊಡ್ಡ ಕೊರತೆಯಾಗಿ ಪರಿಣಮಿಸಿದೆಯೆಂದು ಹೇಳಬಹುದು. ಆದ್ದರಿಂದ ಸಹಕಾರ ಸಂಸ್ಥೆಗಳು ಎತ್ತು ನೀರಾವರಿಗೆ ಆದ್ಯತೆಯನ್ನು ನೀಡಿ ಅದಕ್ಕೆ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಬೇಕಾದುದು ಅಗತ್ಯ. ಜೊತೆಗೆ ರೈತರಿಗೆ ಸಾಲನೀಡಿದ ಮಾತ್ರಕ್ಕೆ ತಮ್ಮ ಕರ್ತವ್ಯ ಮುಗಿಯಿತೆಂದು ಸಹಕಾರಿ ಸಂಸ್ಥೆಗಳು ತಿಳಿಯಬಾರದು. ಕೊಟ್ಟ ಸಾಲವು ನಿರ್ದಿಷ್ಟ ಉದ್ದೇಶಕ್ಕಾಗಿ ಬಳಸಲ್ಪಡುತ್ತಿದೆಯೋ ಇಲ್ಲವೋ ಎನ್ನುವುದರ ಬಗ್ಗೆ ಮೇಲ್ವಿಚಾರಣೆಯನ್ನು (Supervision) ವಹಿಸಬೇಕು, ಮತ್ತು ಸಾಲದ ಮರುಪಾವತಿಯ ಬಗ್ಗೆ ಎಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳಬೇಕು. ಸಂಸ್ಥೆಗಳು ಸಬಲಗೊಳ್ಳಬೇಕಾದರೆ ಜನರ ನೆರವೂ ಅಗತ್ಯವಾಗಿದೆ. ಆದ್ದರಿಂದ ಜನರಲ್ಲಿ ಸಹಕಾರದ ಮಹತ್ವದ ಬಗ್ಗೆ ತಿಳುವಳಿಕೆ ಉಂಟಾಗುವಂತೆ ಸಹಕಾರ ಶಿಕ್ಷಣವನ್ನು ಅವರಿಗೆ ಒದಗಿಸಬೇಕು. ಸಹಕಾರ ಚಳುವಳಿಯ ಬಗ್ಗೆ ಅವರಲ್ಲಿ ವಿಶ್ವಾಸ ಮೂಡಿಸಬೇಕು. ಜನತೆಯಲ್ಲಿ ಸಹಕಾರದ ಬಗ್ಗೆ ಹೆಚ್ಚು ಅರಿವು ಮೂಡಿದಷ್ಟೂ ಅಭಿವೃದ್ಧಿ

ಕಾರ್ಯಗಳು ಪ್ರಗತಿ ಹೊಂದಲು ಸಾಧ್ಯವಾಗುತ್ತದೆ. ಈ ರೀತಿ ಯಾದಾಗ ಮಾತ್ರ ಸಹಕಾರ ಸಂಸ್ಥೆಗಳು ಆರ್ಥಿಕ ಬಲವಿಲ್ಲ ವರಿಗೆ ಆರ್ಥಿಕ ಬಲವನ್ನು ತಂದೊಡ್ಡುವುವಲ್ಲದೆ ರಾಷ್ಟ್ರದ ಅಭ್ಯು ದಯವನ್ನು ಹೊಂದಲು ನೆರವಾಗುವುದು.

ಸಹಕಾರ ಸಂಸ್ಥೆಗಳ ಹಿರಿಮೆಗೆ ಮುಖ್ಯವಾಗಿ ಮೂರು ಕಾರಣ ಗಳನ್ನು ಕೊಡಬಹುದು.

1. ಸಹಕಾರ ಸಂಸ್ಥೆಗಳಿಂದ ಜನರು ಸ್ವಂತ ಕ್ರಿಯಾಶಕ್ತಿ ಯನ್ನು ಬೆಳಸಿಕೊಳ್ಳಬಹುದು. ಅಂದರೆ ಕಾರ್ಯದಲ್ಲಿ ವ್ಯವಸ್ಥಿತ ಕ್ರಮ, ನಿಯಮಬದ್ಧ ಕೆಲಸ ಇವುಗಳನ್ನು ಕಲಿಯಲು ಸಹಕಾರ ಸಂಸ್ಥೆಗಳು ಅವಕಾಶವನ್ನು ಕಲ್ಪಿಸಿಕೊಡುತ್ತವೆ.

2. ಸಹಕಾರ ಸಂಸ್ಥೆಗಳ ಲಾಭವು ಒಬ್ಬ ವ್ಯಕ್ತಿಗೆ ಸೇರದೆ ಹತ್ತು ಜನರಿಗೆ ಲಭ್ಯವಾಗುವಂತಿರುತ್ತದೆ. ಒಬ್ಬ ವ್ಯಕ್ತಿಯು ವ್ಯಾಪಾರಮಾಡಿದರೆ ಅದರ ಲಾಭ ಆತನಿಗೆ ಮಾತ್ರ ಸೇರುತ್ತದೆ. ಆದರೆ ಸಹಕಾರ ಸಂಸ್ಥೆಗಳ ಮೂಲಕ ಮಾಡಿದರೆ, ಆಡಳಿ ಗಾರರೇ ಸಾಮಾನುಗಳನ್ನು ಬಳಸುವವರಾದ್ದರಿಂದ, ಲಾಭ ದಾಸೆಗೆ ಸಾಮಾನುಗಳನ್ನು ಕೊಳ್ಳುವುದಿಲ್ಲ. ಜೊತೆಗೆ ಸಾಮಾನುಗಳ ಗುಣಮಟ್ಟಕ್ಕೂ ಪ್ರಾಧಾನ್ಯತೆ ನೀಡುತ್ತಾರೆ. ಅಲ್ಲದೆ ಒಟ್ಟಿಗೆ ಕೊಳ್ಳುವುದರಿಂದ ಬೆಲೆಯೂ ಕಡಿಮೆಯಾಗು ತ್ತದೆ.

3. ರೈತರು ದಿನಸಿತ್ಯ ಸಾಮಾನುಗಳ ಬಳಕೆದಾರರು ಯಾರೇ ಆಗಿರಲಿ ಸಹಕಾರಸಂಸ್ಥೆಗಳ ಮೂಲಕ ವ್ಯವಸ್ಥಿತ ರೀತಿಯಲ್ಲಿ ಕೆಲಸಮಾಡಬಹುದು. ಇದರಿಂದ ಸಹಕಾರಿ ಸಂಸ್ಥೆಗೆ ಸದಸ್ಯ ರೆಲ್ಲರ ಬುದ್ಧಿಶಕ್ತಿ, ಅನುಭವ, ಶ್ರಮ ಲಭ್ಯವಾಗುತ್ತದೆ.

## ಉಪಸಂಹಾರ

ಸ್ವಾತಂತ್ರ್ಯನಂತರದ ದಶಕಗಳಲ್ಲಿ ನಮ್ಮ ರಾಷ್ಟ್ರದಲ್ಲಿ ಸಹಕಾರಿ ಚಳುವಳಿಯು ಹೆಚ್ಚಿನ ವೈವಿಧ್ಯತೆಯಿಂದ ಕೂಡಿದೆ. ರೈತರಿಗೆ ಸಾಲ ಕೊಡುವ ವ್ಯವಸ್ಥೆಯಿಂದ ಪ್ರಾರಂಭಗೊಂಡ ಈ ಚಳುವಳಿಯು ಇಂದು ಕೃಷಿಸಾಲ, ಮಾರಾಟ, ಬೇಸಾಯ, ಕೈಮಗ್ಗ, ಗೃಹನಿರ್ಮಾಣ, ಗ್ರಾಮಾಂತರ ವಿದ್ಯುದೀಕರಣ, ಸಣ್ಣ ಕೈಗಾರಿಕೆಗಳು. ಮೀನುಗಾರಿಕೆ, ಸಕ್ಕರೆ ಉತ್ಪಾದನೆ, ಹಾಲು ಸಂಗ್ರಹಣೆ, ಸಾರಿಗೆ ಮುಂತಾದ ಹಲವಾರು ಬಗೆಯ ಉತ್ಪಾದನಾ ಚಟುವಟಿಕೆಗಳಲ್ಲಿ ತನ್ನ ಕಾರ್ಯವ್ಯಾಪ್ತಿಯನ್ನು ಬೆಳಸಿದೆ. ಇಂದು ಸಹಕಾರಿ ಚಳುವಳಿಯು ರಾಷ್ಟ್ರದಲ್ಲಿ ಆರ್ಥಿಕ ಜೀವನದ ಅನೇಕ ಕ್ಷೇತ್ರಗಳಲ್ಲಿ ಪ್ರವೇಶಿಸಿ ಸರ್ವತೋಮುಖ ಪ್ರಗತಿಯನ್ನು ಸಾಧಿಸುತ್ತಿದೆ. ಈ ಚಳುವಳಿಯ ಮುಖ್ಯ ಧ್ಯೇಯ ಆರ್ಥಿಕ ಹಾಗೂ ಸಾಮಾಜಿಕ ಏಳಿಗೆ, ಜನತೆಯ ಸಹಕಾರವೇ ಅದರ ಬೆನ್ನಲುಬು. ಸಹಕಾರ ಪದ್ಧತಿಯು ಸ್ವಾವಲಂಬನೆ ಮತ್ತು ಸಾಮಾಜಿಕ ಶೀಲದ ಮೇಲೆ ನಿಂತಿರುವ ಅರ್ಥಸಾಧನೆಯ ಮಾರ್ಗ. ಸಹಕಾರ ತತ್ವದ ತಳಹದಿಯ ಮೇಲೆ ರೂಪಿತಗೊಂಡಿರುವ ಸಹಕಾರ ಸಂಸ್ಥೆಗಳ ಮುಖ್ಯ ಆಕಾಂಕ್ಷೆ ಸಾಮಾನ್ಯ ಮನುಷ್ಯನನ್ನು ಉನ್ನತಸ್ಥಿತಿಗೆ ಒಯ್ಯುವುದು. ಪ್ರತಿಯೊಬ್ಬರಿಗೂ ಸಹಾಯ, ಐಕಮತ್ಯ ಹಾಗೂ ಸಹೋದರ ತತ್ವವು ಈ ಸಂಸ್ಥೆಗಳ ಅಡಿಗಲ್ಲಾಗಿದೆ. ಒಬ್ಬ ವ್ಯಕ್ತಿಯು ನಿಶ್ಯಕ್ತನಾಗಿರಬಹುದು, ಅಧಿಕಾರಹೀನನಾಗಿರಬಹುದು. ಆದರೆ ಈ ಸಂಸ್ಥೆಗಳಲ್ಲಿ ಎಲ್ಲರೂ ಒಟ್ಟುಗೂಡುವುದರಿಂದ ಹಾಗೂ ಎಲ್ಲಾ ಸಂಪತ್ತುಗಳನ್ನು ಒಟ್ಟುಗೂಡಿಸುವುದರಿಂದ ಅವರುಗಳು ಬೇಕಾದ್ದನ್ನು ಸಾಧಿಸಬಹುದು. ಸಹಕಾರವು ಏನನ್ನು ಸಾಧಿಸು

ತ್ತದೆ ಎಂದು ಕೇಳುವುದಕ್ಕಿಂತಲೂ ಏನನ್ನು ಸಾಧಿಸಲಾರದು ಎಂದು ಕೇಳಿದರೆ ಹೆಚ್ಚು ಸಮಂಜಸವಾದೀತು. ಕೇವಲ ಆರ್ಥಿಕ ಚಟುವಟಿಕೆಗಳಿಗೆ ಆಧಾರವಾಗಿರದೆ, ಸಹಕಾರವು ಸಮಾಜದ ಎಲ್ಲಾ ಚಟುವಟಿಕೆಗಳಿಗೂ ಅನ್ವಯಿಸಬಹುದಾದದ್ದಾಗಿದೆ. ಸಹಕಾರವು ಸ್ವಯಂಪ್ರೇರಿತ ಸಂಘಟನೆಯಾಗಿದೆ. ಅಂದರೆ ಸಹಕಾರವು ಅಭಿವೃದ್ಧಿಗೊಳ್ಳಬೇಕಾದರೆ ಸರಕಾರದ ಒತ್ತಡದಿಂದ ಮುಂದುವರಿಯದೆ ಜನರಿಂದ ಪ್ರೇರಿತಗೊಂಡು ಕಾರ್ಯರಂಗಕ್ಕಿಳಿಯಬೇಕು. ಸಹಕಾರವು ಪ್ರತಿಯೊಬ್ಬರ ಮೈ, ಮನಗಳಲ್ಲಿ ಪಸರಿಸಬೇಕು, ದೇಹದ ರಕ್ತದೊಂದಿಗೆ ಬೆರತು ಒಂದಾಗಬೇಕು. ಸಹಕಾರ ತತ್ವಗಳ ಅಡಿಗಲ್ಲಿನ ಮೇಲೆ ರೈತರನ್ನು ಊರ್ಜಿತಗೊಳಿಸುವುದರ ಮೂಲಕ ಕೃಷಿಯಲ್ಲಿ ಅಭಿವೃದ್ಧಿಯನ್ನುಂಟು ಮಾಡಿ ನಾಡನ್ನು ಯಶಸ್ಸಿನ ಹಾದಿಯತ್ತ ಕೊಂಡೊಯ್ಯಲು ಬದ್ಧಕಂಕಣವಾಗಿ ನಿಂತಿರುವ ಸಹಕಾರ ಸಂಸ್ಥೆಗಳ ಉದ್ಧಾರವಾಗಬೇಕಾದರೆ, ಸಹಕಾರ ಜನತೆಯ ಉಸಿರಾಗಬೇಕು. ಗಾಂಧೀಜಿಯವರು ಕಂಡ ರಾಮರಾಜ್ಯದ ಕನಸು ನನಸಾಗಬೇಕಾದರೆ ಸಹಕಾರದಿಂದಲೇ ಸಾಧ್ಯ. ಸಹಕಾರದಿಂದಲೇ ಯಶಸ್ಸು, ಸಹಕಾರದಿಂದಲೇ ವಿಜಯ, ಸಹಕಾರದಿಂದಲೇ ಸುಖಶಾಂತಿಗಳು ಸಿಗಲು ಸಾಧ್ಯ. ಪ್ರತಿಯೊಬ್ಬರೂ ನಿಶ್ಚಿಂತೆಯಿಂದ ಬಾಳಬೇಕು, ಪ್ರತಿಯೊಬ್ಬರ ಕಲ್ಯಾಣವಾಗಬೇಕು ಎನ್ನುವುದಾದರೆ ಸಹಕಾರ ನಮ್ಮ ಜೀವನಮಾರ್ಗವಾಗಬೇಕು.

"ಸಹನಾಭವತು, ಸಹನೌಭುನಕ್ತು, ಸಹವೀರ್ಯಂಕರವಾವಹೈ
ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ"

ಈ ಉಪನಿಷತ್ ವಾಕ್ಯವು ನಮ್ಮ ಸಹಕಾರ ಜೀವನದ ತತ್ವವಾಗಬೇಕು.

ಕೆ.ಸ. ೨೦೧೭೫—ಎಂಯುಪಿಎಂ—೫೦೦೦ ಪ್ರತಿಗಳು—೭-೬-೮೦

